೯ನೇ ವರ್ಷದ ಎರಡನೆಯ ಕುಡಿ

# ಗಾಂಧೀಜಿಯವರ ರಾಜಕೀಯ ಪತ್ರಗಳು

ಸಂಗ್ರಾಹಕರು:
**ಸಿದ್ದವನಹಳ್ಳಿ ಕೃಷ್ಣಶರ್ಮರು**

ಚಾಲುಕ್ಯ ವಿಕ್ರಮ ವರ್ಷ ೮೭೧
ಮಾಘ ಶುದ್ಧ ಚತುರ್ಥಿ

ಸ್ವಾತಂತ್ರ್ಯ ದಿನ
೨೬-೧-೪೭

ಬೆಲೆ:
೨-೦-೦

೯ನೆಯ ವರ್ಷದ ೩ನೇ-೪ನೇ ಕುಡಿ

# ೧೮೫೭

ಅರ್ಥಾತ್

# ಬಂಡಾಯದ ಇತಿಹಾಸ



ಬರೆಹಗಾರರು :

**ಕೆ. ಜಿ. ಜೋಶಿ,** ಬಿ. ಎ., ಬಿ. ಟಿ.,

ಕ್ರಾಂತಿಯ ದಿನವಾದ ೩೧ನೇ ಮೇ ದಿನ
ಪ್ರಸಿದ್ಧವಾಗುವದು.



**ಪ್ರಕಾಶಕರು :**
**ಎನ್. ಎಸ್. ಬೆಂಗೇರಿ**
**ವಿಜಯ ಮುದ್ರಾಲಯ**
**ಧಾರವಾಡ**

**ಪ್ರಕಾಶಕರು :**
**ಬಿ. ಜಿ. ಅವಧಾನಿ**
**ಬಿಂಚಿಸಬಳ್ಳಿ ಚಾವಡಿ**
**ಧಾರವಾಡ**

# ಓದುಗರಲ್ಲಿ

ಇದು ಈ ವರುಷದ ಎರಡನೇ ಕುಡಿ. ಸಕಾಲಕ್ಕೆ ಪ್ರಕಟವಾಗುತ್ತಿರುವದನ್ನು ಕಂಡು ಸಂತೋಷವಾಗುತ್ತಿದೆ. ಈ ಪುಸ್ತಕವನ್ನು ನೋಡಿ ಚಂದಾದಾರರು ಅಚ್ಚರಿಗೊಳ್ಳಬಹುದು. ಬಂಡಾಯದ ಇತಿಹಾಸದ ಬದಲು ಇದೇಕೆ ಎಂದು ವಿಚಾರಿಸಲೂಬಹುದು. ಬಂಡಾಯವು ೧೮೫೭ರಲ್ಲಿ ೩೧ನೇ ಮೇಕ್ಕೆ ಪ್ರಾರಂಭವಾಗಬೇಕೆಂದು ಸಂಕಲ್ಪವಾಗಿತ್ತು, ಅದೇ ದಿನವೇ ಪ್ರಕಟವಾಗುವುದು ಒಳಿತು ಎಂದು ಅನೇಕರಿಂದ ಸೂಚನೆಗಳು ಬಂದುದರಿಂದ ಅಂದೇ ಪ್ರಕಟಿಸುವ ಸಂಕಲ್ಪ ಮಾಡಿದ್ದೇವೆ. ಮತ್ತು ಪುಸ್ತಕವು ಸುಮಾರು ೪೦೦ ಪುಟಗಳಷ್ಟಾಗುವದರಿಂದ ೩–೪ನೇ ಕುಡಿಗಳೆಂದು ಕೊಡಲಾಗುವುದು. ಪುಸ್ತಕವು ದೊಡ್ಡದೂ ಬೆಲೆಯುಳ್ಳದ್ದೂ, ಆಗುವದರಿಂದ ಅಂಚೆಯಲ್ಲಿ ಕಳೆಯುವ ಸಂಭವವಿದೆ. ಹಾಗಾಗಬಾರದೆಂದು ಅಪೇಕ್ಷಿಸುವವರು, ರಜಿಸ್ಟರದ ೩ ಆಣೆಗಳನ್ನು ಕಳಿಸಿದರೆ, ಆಮೂಲಕ ಕಳಿಸಲಾಗುವುದು.

ಮಳೆ ನಿಂತರೂ ಮರದ ಹನಿ ನಿಲ್ಲಲಿಲ್ಲವೆಂಬಂತೆ ಯುದ್ಧ ನಿಂತರೂ ಯುದ್ಧದ ದುಷ್ಪರಿಣಾಮಗಳು ಇನ್ನೂ ಕಡಿಮೆಯಾಗಿಲ್ಲ. ಕಾಗದದ ಅಭಾವವು ಬಹುವಾಗಿ ಕಾಡುತ್ತಿದೆ. ಕಾಗದದ ಬೆಲೆಯು ನಿಯಂತ್ರಿಸಲ್ಪಟ್ಟಿದ್ದರೂ ಕಾಗದದ ಅಭಾವದ ಮೂಲಕ, ಅದು ಕನ್ನಡಿಯೊಳಗಿನ ಗಂಟಾಗಿದೆ. ಕಳ್ಳಪೇಟೆಯನ್ನು ನಿಲ್ಲಿಸಲು ಯತ್ನಿಸಿದಷ್ಟು ಅದು ಬೆಳೆಯತೊಡಗಿದೆ. ಇದು ನಮ್ಮ ಇಂದಿನ ಜೀವನ. ಈ ಪುರಾಣವೇಕೆ, ಹೆಚ್ಚು ಹಣ ಕೊಡಿ ಎಂಬುದೇ ನಿಮ್ಮ ಪ್ರಸ್ತಾವನೆಯ ಅರ್ಥವೇ ಎಂದು ಕೇಳಬಹುದು. ಇಲ್ಲ. ನಿಮ್ಮಿಂದ ಹಣ ಅಪೇಕ್ಷಿಸದೆ ಸಹಾಯವನ್ನು ಅಪೇಕ್ಷಿಸುತ್ತಿದ್ದೇನೆ. ಈಗಿರುವ ಚಂದಾದಾರರಿಂದ ಬಳ್ಳಿಯ ಅರಹೊಟ್ಟೆ ತುಂಬುತ್ತದೆ. ಪ್ರತಿಯೊಬ್ಬರು ಒಬ್ಬೊಬ್ಬ ಚಂದಾದಾರರನ್ನು ದೊರಕಿಸಿಕೊಟ್ಟರೆ, ಬಳ್ಳಿಯು ಬಲಿತು ಚಿಗಿತು ನಿಮಗೆ ಸುಂದರವಾದ ಕುಡಿಗಳನ್ನು ಕೊಡಲು ಹೆಚ್ಚು ಸಮರ್ಥವಾಗುವದೆಂದು

ಬಿನ್ನವಿಸುತ್ತೇನೆ. ಮನಸ್ಸಿನಲ್ಲಿ ಅನೇಕ ಕಲ್ಪನೆಗಳು ಹೊಳೆಯುತ್ತಿದ್ದರೂ ಹಣದ ಅಭಾವದ ಮೂಲಕ ಅಲ್ಲಿಯೇ ಕಮರಿ ಹೋಗುತ್ತಲಿವೆ. ಆದುದರಿಂದ ವಾಚಕವರ್ಗವು ಸಕ್ರಿಯ ಸಹಾಯವನ್ನು ನೀಡಬೇಕೆಂದು ಬಿನ್ನವಿಸುತ್ತೇನೆ.

ರಾಜಕಾರಣದ ಅಭ್ಯಾಸಿಗಳಿಗೆ, ಈ ಪುಸ್ತಕವು ಒಳ್ಳೇ ಅನುಕೂಲವಾಗುವದೆಂದು ಆಶಿಸುತ್ತೇನೆ. ಬ್ರಿಟಿಶ್ ಸಾಮ್ರಾಜ್ಯವು ಭಾರತದ ಹಿತಕಾರಿ, ಎಂದು ಹೇಳುವ ಮಹಾತ್ಮರೇ ಬ್ರಿಟಿಷರೇ ಭಾರತವನ್ನು ತೀವ್ರವಾಗಿ ಬಿಟ್ಟು ತೆರಳಿರಿ, ಎಂಬ ಘೋಷಣೆಯನ್ನು ಮಾಡುವವರೆಗಿನ ಅವರ ಬದಲಾವಣೆಗಳನ್ನು ಇದರಲ್ಲಿ ನಾವು ಕಾಣಬಹುದು. ಈ ಚಿತ್ರವನ್ನು ಸುಂದರ ರೀತಿಯಿಂದ ಚಿತ್ರಿಸಿಕೊಟ್ಟದ್ದಕ್ಕಾಗಿ ಬಳ್ಳಿಯು ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮರಿಗೆ ಋಣಿಯಾಗಿದೆ.

ಮುದ್ರಣಾಲಯದ ತೊಂದರೆಗಳನ್ನು ಸಹಿಸಿಯೂ ಸಕಾಲಕ್ಕೆ ಮುದ್ರಿಸಿ ಕೊಟ್ಟ ಹೊಸಕೇರಿ ನಾರಾಯಣರಾಯರು ಅಭಿನಂದನಕ್ಕೆ ಪಾತ್ರರು. 'ಸಂಯುಕ್ತಕರ್ನಾಟಕ'ದ ಸಹಾಯವು ದೊರೆಯದಿದ್ದರೆ, ಪುಸ್ತಕವು ಪ್ರಕಾಶವನ್ನೇ ಕಾಣುತ್ತಿದ್ದಿಲ್ಲ. ಅವರ ಆಭಾರ ಎಷ್ಟುಮನ್ನಿಸಿದರೂ ಕಡಿಮೆಯೇ ಇದೆ. ಪ್ರತ್ಯಕ್ಷ ಅಪ್ರತ್ಯಕ್ಷ ರೀತಿಯಿಂದ ನೆರವಾದ ಎಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ

ಸ್ವಾತಂತ್ರ್ಯ ದಿನ
೨೬—೧—೧೯೪೭

ತಮ್ಮ ಸೇವಕ
**ಬುರ್ಲಿ ಬಿಂದುಮಾಧವ**

**ಮಿಂಚಿನಬಳ್ಳಿಯ ಸಹಾಯಕರು**

೧ ಶ್ರೀ. ಎನ್. ಕೆ. ದೀಕ್ಷಿತರು, ವಕೀಲ, ಧಾರವಾಡ ೧೦ ರೂ.
೨ ,, ತಿರುಮಲರಾವ ಅನಂತರಾವ ದೇಶಪಾಂಡೆ, ಹುಲ್ಲೀಕೇರಿ

## ಮೊದಲ ಮಾತು

ಗಾಂಧೀಜಿಯವರ ಜೀವನವು ಪ್ರಪಂಚದ ಜೀವನದ ವಿವಿಧ ಕ್ಷೇತ್ರಗಳಲ್ಲಿ ಬೆಳಕನ್ನು ಕೊಡುತ್ತಲಿದೆ. ಅವರ ವಾಙ್ಮಯವನ್ನು ವಿವಿಧ ಕ್ಷೇತ್ರಕ್ಕೆ ಅನುಕೂಲವಾಗುವಂತೆ, ವಿಂಗಡಿಸಿ, ರೂಪಗೊಡುವ ಕಾರ್ಯವೂ ನಡೆಯುತ್ತಲಿದೆ. ವಿದ್ಯಾರ್ಥಿಗಳು, ಸ್ತ್ರೀಯರು, ಇವೇ ಮೊದಲಾದ ವಿಷಯಗಳ ಮೇಲಿನ ಬರೆಹಗಳನ್ನು ಸಂಗ್ರಹಿಸಿ, ಪ್ರಕಟಿಸಿದುದೇ ಈ ನಮ್ಮ ಪ್ರಕಟನೆಗೂ ಪ್ರೇರಣೆಯು.

ಗಾಂಧೀಜಿಯವರು ಭಾರತೀಯ ಕ್ರಾಂತಿವೀರರು. ನಿದ್ರೆಯಲ್ಲಿದ್ದ ಭಾರತವನ್ನು ಬಡಿದೆಬ್ಬಿಸಿ, ಅವರಿಂದ ಕ್ರಾಂತಿಯನ್ನು ಮಾಡಿಸಿದ ಮಾಡಿಸುತ್ತಿರುವ ಮಹಾ ಪುರುಷರು. ರಾಜಕಾರಣವನ್ನು ಅಭ್ಯಸಿಸುವ ರಾಜಕಾರಣಿಗಳು ಗಾಂಧೀಜಿಯವರ ಈ ಕ್ರಾಂತಿಯ ಇತಿಹಾಸವನ್ನು ಓದದೆ ಅವರ ಅಭ್ಯಾಸವು ಎಂದೂ ಪೂರ್ಣವಾಗಲಾರದು. ಜಗತ್ತಿನ ಇತಿಹಾಸದಲ್ಲಿಯೇ ಹೊಸ ಅಧ್ಯಾಯವನ್ನು ಪ್ರಾರಂಭಿಸಿದ ಮಹಾತ್ಮರ ರಾಜಕಾರಣವು ರಾಜಕಾರಣದಲ್ಲಿ ನವೀನ ತತ್ತ್ವಜ್ಞಾನ, ನವತಂತ್ರಗಳನ್ನೇ ಪ್ರಾರಂಭ ಮಾಡಿದೆ. ವಿದ್ಯಾರ್ಥಿಗಳ ಅವರ ಉಪದೇಶವು ವಿದ್ಯಾರ್ಥಿ-ಜಗತ್ತಿಗೆ ಬೆಳಕನ್ನು ಬೀರುವಂತೆ, ಮಹಾತ್ಮರ ರಾಜಕಾರಣದ ಪತ್ರಗಳು ರಾಜಕಾರಣದ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕವಲ್ಲವೇ ?

ಈ ಉದ್ದೇಶವನ್ನು ಕಣ್ಣೆದುರಿಗೆ ಇಟ್ಟುಕೊಂಡು, ಮಹಾತ್ಮರು ತಮ್ಮ ಚಳುವಳಿಯಲ್ಲಿ ಕಾಲಕಾಲಕ್ಕೆ ಸರಕಾರಕ್ಕೆ ಬರೆದ ಎಲ್ಲ ಓಲೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಬ್ರಿಟಿಶ್ ಸಾಮ್ರಾಜ್ಯವು ಭಾರತಕ್ಕೆ ಹಿತಕಾರಿ ಎನ್ನುತ್ತ ಭಾರತದಲ್ಲಿ ಕಾಲಿಟ್ಟ ಮಹಾತ್ಮರು ಬ್ರಿಟಿಶರೇ ಭಾರತವನ್ನು ಬಿಟ್ಟು ನೊಲಗಿರಿ, ಎಂಬ ಗರ್ಜನೆಯವರೆಗಿನ ಅವರ ರಾಜಕಾರಣವು ಅತ್ಯಂತ ಕ್ರಾಂತಿಕಾರಿಯೂ

ಉದ್ಬೋಧಕವೂ ಇದೆ ಎಂದು ಬೇರೆ ಹೇಳಬೇಕೆ? ಜಗತ್ತಿನಲ್ಲಿ ಮಹಾನ್ ಮಹಾನ್ ರಾಜಕಾರಣಿಗಳೇ ಬೊಟ್ಟು ಕಚ್ಚುತ್ತಿರುವರು. ಆಳವಾಗಿ ಅವರನ್ನು ಅಭ್ಯಸಿಸುತ್ತಿರುವರು.

ಅವರ ರಾಜಕಾರಣವು ಗಹನವಾಗಿದೆ. ವೀರಚರಿತೆಯಾಗಿದೆ. ಅವರ ಶಸ್ತ್ರವಿನ್ಯಾಸ, ಉಪಸಂಹಾರ, ಅವರ್ಣನೀಯವಿವೆ. ಶತೃವಿನ ಮರ್ಮಘಾತಮಾಡುವ ಅವರ ನಿಪುಣತೆ, ಅವರನ್ನು ಮೂದಲಿಸುವ ರೀತಿ ಜನರನ್ನು ಬೆರಗುಗೊಳಿಸುತ್ತವೆ. ಮಹಾತ್ಮರ ಈ ಕ್ರಾಂತಿಜೀವನದ ದರ್ಶನವಾಗಬೇಕೆಂಬುದೇ ಈ ಹೊತ್ತಿಗೆಯ ಹೆಬ್ಬಯಕೆ. ಒಬ್ಬನಾದರೂ ಕನ್ನಡ ತರುಣನು ಪ್ರೇರಿತನಾಗಿ ಗಾಂಧೀಜೀಯವರ ಜೀವನವನ್ನು ತಿಳಿಯಲು ಹೆಣಗಿದರೆ, ನಮ್ಮ ಈ ಪ್ರಯತ್ನವು ಸಫಲವಾಯಿತೆಂದು ತಿಳಿಯುತ್ತೇವೆ.

ಇಲ್ಲಿ ಅಸಹಕಾರ ಆಂದೋಲನದಿಂದ ಓಲೆಗಳನ್ನು ಸಂಗ್ರಹಿಸಲಾಗಿದೆ. ಪರಿಶಿಷ್ಟದಲ್ಲಿ ಅದಕ್ಕಿಂತ ಮೊದಲಿನವುಗಳನ್ನು ಕೊಡಲಾಗಿದೆ. ಆವಶ್ಯಕಂಡಲ್ಲಿ ಸರಕಾರದ ಉತ್ತರವನ್ನೂ ಕೂಡಲಾಗಿದೆ.

ಗಾಂಧೀಜಿಯವರ ರಾಜಕಾರಣವೆಂಬ ದೃಷ್ಟಿಯಿಂದ ಈ ಪುಸ್ತಕವನ್ನು ಓದಲು ಬಿನ್ನವಿಸುತ್ತೇವೆ. ಇದೇ ಎಚ್ಚತ್ತು ರಾಜಕಾರಣದಲ್ಲಿ ಅಡಿಯಿಡುತ್ತಿರುವವರಿಗೆ, ಈ ಪುಸ್ತಕವು ನೆರವಾಗುವದೆಂದು ನಂಬಿದ್ದೇನೆ.

ಸ್ವಾತಂತ್ರ್ಯ ದಿನ
೨೬—೧—೪೭

**ಸ್ವಾತಂತ್ರ್ಯ ಪ್ರಿಯ**

———

# ಪರಿವಿಡಿ


ಪುಟ

೧ **ಓದುಗರಿಗೆ** ೯

೨ **ಅಸಹಕಾರ** ೧೨

೧ ವೈಸರಾಯರಿಗೆ
೨ ಅಗಸ್ಟ ೧
೩ ಹಿಂದುಸ್ಥಾನದಲ್ಲಿಯ ಪ್ರತಿಯೊಬ್ಬ ಇಂಗ್ಲಿಷನಿಗೆ
೪ ,, ,,
೫ ಬಾರ್ಡೋಲಿಯ ರಣಕಹಳೆ

೩ **ಶಾಸನೋಲ್ಲಂಘನ** ೩೪

೧ ಮಹಾತ್ಮರ ೧೧ ಬೇಡಿಕೆಗಳು
೨ ಆಯರ್ವಿನ್ನರಿಗೆ
೩ ಧರಸಾನಾ ಉಪ್ಪಿನ ಅಗರದ ಮೇಲೆ ದಾಳಿ
೪ ಲಂಡನ್ನಿನ ಮಾರ್ಗದಲ್ಲಿ
೫ ದುಂಡು ಮೇಜಿನ ನಂತರ

೪ **ಪ್ರಾಯೋಪವೇಶ** ೬೩

೧ ಯರವಡಾ ಪ್ರಾಯೋಪವೇಶ
೨ ಸ್ಯಾಮ್ಯುಎಲ್ ಹೋರರ ಉತ್ತರ
೩ ರ್ಯಾಮ್ಸೆ ಮೆಕ್ಡೊನಾಲ್ಡಗೆ
೪ ಮೆಕ್ಡೊನಾಲ್ಡರ ಉತ್ತರ
೫ ಗಾಂಧೀಜಿಯ ಕೊನೆಯ ಉತ್ತರ
೬ ಮುಂಬಯಿ ಸರಕಾರಕ್ಕೆ

೫ **ನರೇಂದ್ರರಿಗೆ** ೮೨

೬ **ವಾಕ್‌ಸ್ವಾತಂತ್ರ್ಯದ ಸತ್ಯಾಗ್ರಹ** ೮೯

೧ ಶ್ರೀಮಂತ ಲಿನ್‌ಲಿಥ್‌ಗೋಗೆ
೨ ಓದುಗರಿಗೆ

೭ **ಚಲೇ ಜಾವ್ ಚಳುವಳಿ** ೯೬

೧ ಪ್ರತಿಯೊಬ್ಬ ಬ್ರಿಟಿಶ್‌ನಿಗೆ
೨ ಪ್ರತಿಯೊಬ್ಬ ಜಪಾನಿಗೆ
೩ ಅಮೇರಿಕದ ಗೆಳೆಯರಿಗೆ
೪ ಚೀನಿ ದಳಪತಿಗೆ
೫ ಇಂಗ್ಲೀಷ ಗೆಳೆಯರಿಗೆ

೮ **ಮಹೋಪವಾಸ** ೧೦೯

೧ ಲಿನ್‌ಲಿಥ್‌ಗೋಗೆ
೨ ,,
೩ ದುಃಖದ ಕತೆ
೪ ಅಹಿಂಸಾಪಂಥಿ
೫ ಒಂದಕ್ಕೆರಡಲ್ಲ ಹತ್ತು ಸಾವಿರ
೬ ಅಗ್ನಿಪರೀಕ್ಷೆ
೭ ಉಪವಾಸ

೯ **ಮಹಾಕ್ರಾಂತಿಯ ನಂತರ** ೧೪೨

೧ ವೇವೆಲ್ಲರಿಗೆ, ಖಡಾಖಡಿ
೨ ವೈಸರಾಯರ ಉತ್ತರ, ಕೊನೆಯ ಪತ್ರ

೧೦ **ಪರಿಶಿಷ್ಟ** ೧೬೦

೧ ಚಂಪಾರಣ್ಯ
೨ ರೌಲೆಟ್ ಕಾಯಿದೆ
೩ ಮಾನವನ ಹಕ್ಕುಗಳು
೪ ಮೌಲಾನಾಗೆ

# ಗಾಂಧೀಜಿಯವರ ರಾಜಕೀಯ ಪತ್ರಗಳು

## ಓದುಗರಿಗೆ

೩—೪—೧೯೨೪

'ಯಂಗ್ ಇಂಡಿಯಾ'ದ ಸಂಪಾದಕತನವನ್ನು ಮತ್ತೆ ವಹಿಸಿಕೊಳ್ಳುತ್ತಿದ್ದೇನಾಗಲಿ, ಬಹಳ ಸಂಕೋಚದಿಂದ ಹಾಗೆ ಮಾಡುತ್ತಿದ್ದೇನೆ. ಪತ್ರಿಕೆ ನಡೆಸಲು ಸಾಕಷ್ಟು ಬಲ ಇನ್ನೂ ಬಂದಿದೆಯೋ ಇಲ್ಲವೋ ನನಗೆ. ಮುಂದೇನೋ ನನಗೆ ತಿಳಿಯದು. ಯರವಡಾದಲ್ಲಿ ಏಕಾಂತದಲ್ಲಿದ್ದವನನ್ನು ದೇವರು ಏಕೆ ಹೊರಗೆಳೆದು ತಂದನೋ? ಅವನ ಇಚ್ಛೆಯೇನೋ ಮಸಕುಮಸಕಾಗಿ ಮಾತ್ರ ನನಗೆ ಕಂಡೀತು. ಯಂಗ್ ಇಂಡಿಯಾ, ನವಜೀವನದ ಸಂಪಾದಕತನ ವಹಿಸಿಕೊಳ್ಳುವುದರಲ್ಲೂ ನನಗೆ ಆ ಬೆಳಕು ಕಂಡಷ್ಟು ಮಟ್ಟಿಗೆ ಅದನ್ನು ಅನುಸರಿಸುತ್ತಿದ್ದೇನೆ.

ಓದುಗರಿಗೆ ನಾ ತಿಳಿಸಬಹುದಾದ ಹೊಸ ಸಂದೇಶವೇನೂ ಇಲ್ಲ. ಸ್ವರಾಜ್ಯಶಾಸನಸಭೆಯ ಕೃತಿಯಿಂದ ನಾ ಸ್ವತಂತ್ರನಾದೇನು, ಸ್ವತಂತ್ರ ಭಾರತದ ಸೇವೆಯಲ್ಲಿ ನನ್ನ ಅಳಿಲಪಾಲನ್ನು ಸಲ್ಲಿಸಿಯೇನು ಎಂದೆಣಿಸಿದ್ದೆ. ಅದು ಆಗಲಿಲ್ಲ.

ನಾವಿನ್ನೂ ಸ್ವಾತಂತ್ರ್ಯವನ್ನು ಗಳಿಸಬೇಕು. ನನ್ನಬಳಿ ಹೊಸ ಕಾರ್ಯಕ್ರಮವೇನೂ ಇಲ್ಲ. ಹಳೇ ಕಾರ್ಯಕ್ರಮದಲ್ಲಿ ನನ್ನ ವಿಶ್ವಾಸ ಎಂದಿನಂತೆ ಇದೆ; ಇನ್ನೂ ಹೆಚ್ಚೇ ಅಲ್ಲದಿದ್ದರೂ ಹಿಂದಿನಷ್ಟೇ ಇದೆ. ನಮ್ಮ ಇಂದಿನ ದಿಗಂತವನ್ನು ಕಾಳಗತ್ತಲೆ ಕವಿದಾಗಲೇ ನಮ್ಮ ಧ್ಯೇಯ ಶ್ರದ್ಧೆ, ಮಾರ್ಗ ಶ್ರದ್ಧೆಯ ಪರೀಕ್ಷೆ ನಡೆಯುವದು.

ಅಂತೇ ನನ್ನ ಮನಸ್ಸಿಗೆ ತೋರಿದುದರಲ್ಲಿ, ಈ ಯಂಗ್ ಇಂಡಿಯಾದಲ್ಲಿ ಹೊಸವಿಧಾನ, ಹೊಸನೀತಿ, ಯಾವುದೂ ಮೂಡಿಬಾರದಿದ್ದರೂ ಪತ್ರಿಕೆ ಹಳ

ಸಿರದೆಂದು ಭಾವಿಸಿರುತ್ತೇನೆ. ಸತ್ಯ ಹಳಸಿದಾಗ ಯಂಗ್ ಇಂಡಿಯಾ ಹಳಸೀತು. ಸತ್ಯ ನಿಸ್ಸಾರವಾದರೆ ಇದೂ ನಿಸ್ಸಾರವಾದೀತು. ನಾನು ದೇವರನ್ನು ಮುಖಾ ಮುಖಿ ನಿಂತು ನೋಡಬಯಸುತ್ತೇನೆ. ದೇವರು ಎಂದರೆ ಸತ್ಯ ಎಂಬುದನ್ನು "ನಾ ಬಲ್ಲೆ." ದೇವರನ್ನು ತಿಳಿಯಲು ನನಗೆ ಗೊತ್ತಿರುವ ದಾರಿ ಒಂದೇ— ಅಹಿಂಸೆ, ಪ್ರೇಮ. ಭಾರತ ಸ್ವಾತಂತ್ರ್ಯಕ್ಕಾಗಿ ನಾ ಬದುಕಿದ್ದೇನೆ; ಅದಕ್ಕಾಗಿ ಸಾಯಲೂ ಸಾಯುತ್ತೇನೆ. ಏಕೆಂದರೆ, ಅದು ಸತ್ಯದ ಅಂಶ. ಸ್ವತಂತ್ರಭಾರತ ವಾದರೇನೇ ನಿಜವಾದ ದೇವರನ್ನು ಪೂಜಿಸಲು ಸಾಧ್ಯ. ಹಿಂದುಸ್ಥಾನದಲ್ಲಿ ಹುಟ್ಟಿ ಭಾರತೀಯ ಸಂಸ್ಕೃತಿಯನ್ನು ಜನ್ಮತಃ ಪಡೆದುದರಿಂದ ಭಾರತದ ಸೇವೆಗೆ ನಾನು ಯೋಗ್ಯನಾಗಿದ್ದೇನೆ. ನನ್ನ ಸೇವೆಯನ್ನು ಬಯಸಲು ಭಾರತಕ್ಕೆ ಪ್ರಥಮಾಧಿಕಾರವಿದೆ. ಅಂತೇ ನಾನು ಭಾರತ ಸ್ವಾತಂತ್ರ್ಯಕ್ಕಾಗಿ ಶ್ರಮಿ, ಸುತ್ತೇನೆ. ನನ್ನ ಸ್ವದೇಶೀಧರ್ಮ, ಅದನ್ನು ವಿಧಿಸುತ್ತಿದೆ. ಆದರೆ ನನ್ನ ದೇಶಾಭಿ ಮಾನ ಅನ್ಯವಿರೋಧಿಯಲ್ಲ. ಉಳಿದ ದೇಶ ಯಾವುದಕ್ಕೂ ಪೀಡೆಯಾಗ ದಂಥದು ಮಾತ್ರವೇ ಅಲ್ಲ, ನಿಜವಾಗಿಯೂ ಎಲ್ಲರಿಗೂ ಹಿತಕರವಾಗುವಂಥದು. ನಾನು ಕಲ್ಪಿಸಿಕೊಂಡ ಭಾರತ ಸ್ವಾತಂತ್ರ್ಯ ಜಗತ್ತಿಗೆ ಎಂದೂ ಕಂಟಕವಾಗ ಲಾರದು.

ಲೋಕಕಂಟಕವಾಗದಿರಬೇಕಾದರೆ ಸ್ವಾತಂತ್ರ್ಯ ಸಾಧನೆಯ ವಿಧಾನ ಪೂರ್ಣ ಅಹಿಂಸಾತ್ಮಕವಾಗಿರಬೇಕು. ಹಿಂದುಸ್ಥಾನ ಹಿಂಸೆಯನ್ನವಲಂಬಿಸಿದರೆ ಭಾರತ ಸ್ವಾತಂತ್ರ್ಯದಲ್ಲಿ ನನ್ನ ಆಸಕ್ತಿ ಲಯವಾದೀತು. ಏಕೆಂದರೆ ಹಿಂಸೆಯ ಫಲ ಸ್ವಾತಂತ್ರ್ಯವಲ್ಲ. ಪ್ರಚ್ಛನ್ನದಾಸ್ಯ. ನಮಗಿನ್ನೂ ಸ್ವಾತಂತ್ರ್ಯಸಿಕ್ಕಿಲ್ಲವೆಂದರೆ ನಾವು ಕಾಯಾ-ವಾಚಾ-ಮನಸಾ ಅಹಿಂಸಾವಲಂಬಿಗಳಾಗಿಲ್ಲದುದೇ ಕಾರಣ. ಅಹಿಂಸೆಯನ್ನು ನಮ್ಮ ಆಚಾರವಾಗಿ ಮಾಡಿಕೊಂಡಿದ್ದೇವೆ. ಬೇಕಾದ ದಾರಿ ಯಿಂದಲೂ ನಮಗೆ ಸ್ವಾತಂತ್ರ್ಯ ಸಿಗದೆಂಬುದು ಗೊತ್ತು. ನಮ್ಮ ವಿಧಾನ ವಂಚನೆಯಲ್ಲ. ಆಗಬಾರದು. ಅದು ಅಹಿಂಸೆಯ ವೇಷದಲ್ಲಿ ಹಿಂಸೆಯನ್ನು ನಾವು ಬೆಳಸಬಾರದು. ಇಂಥ ಉದ್ದೇಶಕ್ಕಾಗಿ ಇಷ್ಟುಕಾಲ ನಾವು ಅಹಿಂಸೆಯನ್ನು ಅವಲಂಬಿಸುತ್ತೇವೆ; ಎಂದಾಗ ಅಷ್ಟುಕಾಲ ಆ ಉದ್ದೇಶಕ್ಕಾಗಿ ನಮ್ಮ ಮಾತು ಕೃತಿ ಎರಡೂ ಅಹಿಂಸಾತ್ಮಕವಾಗಬೇಕು. ಮರಣದಂಡನೆಗೆ ಗುರಿಯಾದವ ನನ್ನು ಕೂಡ ಪ್ರಾಮಾಣಿಕನಾದ ಕಾರಾಗಾರಾಧಿಕಾರಿ ಹಾಗೆ ನೋಡಿಕೊಳ್ಳು ತ್ತಾನೆ. ಗಲ್ಲಿಗೇರಿಸುವ ದಿನದ ವರೆಗೆ ತನಗೇ ಪ್ರಾಣಾಪಾಯವಾದರೂ ಇವನ

ಪ್ರಾಣವನ್ನುಳಿಸುತ್ತಾನೆ. ಇವನ ಯೋಗ ಕ್ಷೇಮದ ಚಿಂತೆ ಮಾಡುತ್ತಾನೆ. ಆ ಕಾಲದಲ್ಲಿ ಅವನು ಇವನ ವಿಷಯದಲ್ಲಿ ಕಾಯಾ-ವಾಚಾ-ಮನಸಾ ಅಹಿಂಸಾಪಂಥಿ.

ನಮ್ಮ ನಮ್ಮೊಳಗೂ ವಿರೋಧಿಗಳೊಡನೆಯೂ— ಆಡಳಿತಗಾರರಾಗಲಿ ಅವರ ಬೆಂಬಲಗಾರರಾಗಲಿ—ಅಹಿಂಸೆಯಿಂದ ನಡೆದುಕೊಳ್ಳುವಂತೆ ನಾವು ಶಪಥ ಮಾಡಿದ್ದೇವೆ. ಅವರನ್ನು ಹೆದರಿಸಿ ನಮ್ಮ ಕೆಲಸ ಸಾಧಿಸಿಕೊಳ್ಳ ಬಾರದು. ಅವರ ಮನವೊಲಿಸಿ ಉತ್ತಮ ಗುಣವನ್ನು ಪ್ರಚೋದಿಸಬೇಕು ಎಂದು ನಿರ್ಧರಿಸಿದ್ದೇವೆ. ತಿಳಿದೋ ತಿಳಿಯದೆಯೋ ನಮ್ಮಲ್ಲಿ ಮಾತುಬಲ್ಲವ ರೆಲ್ಲ ನಮ್ಮ ಶಪಥವನ್ನು ಪಾಲಿಸಿಲ್ಲ. ನಮ್ಮ ವಿರೋಧಿಗಳ ಬಗ್ಗೆ ಅಸಹನೆ ತೋರಿದ್ದೇವೆ. ನಮ್ಮವರೇ ನಮ್ಮನ್ನು ನಂಬಲಾರದಾಗಿದ್ದಾರೆ. ನಮ್ಮ ಅಹಿಂಸೆಯನ್ನು ಅವರು ಎಳ್ಳಷ್ಟೂ ನಂಬರು. ಹಿಂದುಗಳೂ ಮುಸಲ್ಮಾನರೂ ಎಷ್ಟೋ ಕಡೆ ಅಹಿಂಸೆಯಲ್ಲ, ಹಿಂಸೆಯ ದಾರಿ ತುಳಿದಿದ್ದಾರೆ. ‘ ಪರಿವರ್ತನ ವಾದಿ ’ಗಳೂ ‘ ಪರಿವರ್ತನ ವಿರೋಧಿ ’ಗಳೂ ಸಹ ಪರಸ್ಪರ ನಿಂದೆಯ ಓಕಳಿ ಯಾಡಿದ್ದಾರೆ. ‘ತಮ್ಮದೇ ಸತ್ಯ ಎಂದು ಇಬ್ಬರೂ ಹೇಳಿದ್ದಾರೆ. ಅಜ್ಞಾನದ ಅಂಧ ವಿಶ್ವಾಸದಿಂದ ಪರಸ್ಪರ ಮೂರ್ಖತನವನ್ನೂ ಹಳಿದಿದ್ದಾರೆ.

ಆದ್ದರಿಂದ ಸಾರ್ವಜನಿಕ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ಅಹಿಂಸೆ ಎಷ್ಟು ಆಗತ್ಯ. ಎಷ್ಟು ಉಪಯೋಗಕರ ಎಂಬುದನ್ನು ವಿವರಿಸೀತು ‘ಯಂಗ್ ಇಂಡಿಯಾ’ ಇದು ಅದರ ಪ್ರಧಾನ ನೀತಿ.

ಮೋ. ಕ. ಗಾಂಧಿ

# ಅಸಹಕಾರ

೧ ವೈಸರಾಯರಿಗೆ

೨ ಅಗಸ್ಟ ೧

೩ ಹಿಂದುಸ್ಥಾನದಲ್ಲಿಯ ಪ್ರತಿಯೊಬ್ಬ ಇಂಗ್ಲೀಷನಿಗೆ

೪ ,, ,, ,,

೫ ಬಾರ್ಡೋಲಿಯ ರಣ-ಕಹಳೆ.

# ಅಸಹಕಾರ ಪ್ರಾರಂಭ

## ವೈಸರಾಯರಿಗೆ ಪತ್ರ

[ ಹಿಂದುಸ್ಥಾನದಲ್ಲಿ ಅಸಹಕಾರ ಚಳುವಳಿ ಪ್ರಾರಂಭವಾಗುವ ಮುನ್ನ ಮೊದಲು ಭಾರತೀಯ ನವೀನ ನಾಯಕರು ,ವೈಸರಾಯರಿಗೆ ಪತ್ರ ಬರೆದು ಸೆಪ್ರೆಸ್ ಕರಾರನ್ನು ತೊಡೆದು ಹಾಕಲು ಕೇಳಿದರು. ಇಲ್ಲವಾದರೆ ಆಗಸ್ಟ ೧ ರಿಂದ ನಮ್ಮ ದೇಶೀಯರು ಸಹಕಾರ ಮಾಡದೆ ಸರಿದು ನಿಲ್ಲುತ್ತೇವೆ ಎಂದು ಸೂಚಿಸಿದರು. ಗಾಂಧಿಜಿಯೂ ಅದೇರೀತಿ ಪತ್ರಬರೆದು ಅವರನ್ನು ಸಮರ್ಥಿಸಿದರು. ]

ಪ್ರಿಯ ವೈಸರಾಯರಿಗೆ,

‘ ನಾನು ಸ್ವಲ್ಪ ಮಟ್ಟಿಗೆ ತಮ್ಮ ವಿಶ್ವಾಸಪಾತ್ರನಾದವ. ಬ್ರಿಟಿಷ್ ಸಾಮ್ರಾಜ್ಯದ ಹಿತಚಿಂತಕನೆಂದು ಭಾವಿಸಿಕೊಂಡವ. ಆದ್ದರಿಂದ ತಮಗೂ ತಮ್ಮ ಮೂಲಕ ಬ್ರಿಟಿಷ್ ಮಂತ್ರಿಗಳಿಗೂ ಖಿಲಾಫತ್ ಚಳುವಳಿಗೂ ನನಗೂ ಇರುವ ಸಂಬಂಧವನ್ನೂ ಅದರ ಬಗ್ಗೆ ನನ್ನ ನಡಾವಳಿಯನ್ನೂ ವಿವರಿಸಿ ತಿಳಿಸಬೇಕಾದುದು ನನ್ನ ಕರ್ತವ್ಯ.

ಯುದ್ಧ ಪ್ರಾರಂಭವಾದಾಗಲೇ, ಲಂಡನ್ನಿನಲ್ಲಿ ಭಾರತೀಯ ಸ್ವಯಂ ಸೇವಕ ದಳವನ್ನು ಸರಿಪಡಿಸುತ್ತಿದ್ದಾಗ ಖಿಲಾಫತ್ ವಿಷಯದಲ್ಲಿ ನನಗೆ ರುಚಿ ಹುಟ್ಟಿತು. ತುರ್ಕಸ್ತಾನ ಜರ್ಮನಿಯ ಜೊತೆಹಿಡಿದಾಗ ಲಂಡನ್ನಿನ ಮುಸಲ್ಮಾನರ ಚಿಕ್ಕಗುಂಪು ಬಹಳ ಆಂದೋಲನಗೊಂಡಿತು. ೧೯೧೫ರ ಜನವರಿಯಲ್ಲಿ ನಾನು ಹಿಂದುಸ್ಥಾನಕ್ಕೆ ಹಿಂದಿರುಗಿದಾಗ ನನಗೆ ಸಿಕ್ಕ ಮುಸಲ್ಮಾನರೆಲ್ಲರಲ್ಲೂ ಅದೇ ಬಗೆಯ ಆಂದೋಲನ ಇದ್ದುದನ್ನು ನೋಡಿದೆ. ಗುಪ್ತ ಸಂಧಿಗಳ, ಒಳ ಕರಾರುಗಳ ವಿಷಯ ರಟ್ಟಾದ ಮೇಲಂತೂ, ಈ ಕಾತರ ಅತಿಯಾಯಿತು. ಬ್ರಿಟಿಷರ ಉದ್ದೇಶವೇ ಅನುಮಾನಾಸ್ಪದವೆನಿಸಿ ಅವರ ಮನಸ್ಸಿನಲ್ಲಿ ಆಶಾ

ಭಂಗದ ಭಾವನೆ ತುಂಬಿಕೊಂಡಿತು. ನಿರಾಶೆಗೆ ಬಲಿಯಾಗಬೇಡಿ, ನಿಮ್ಮ ಭಯವನ್ನೂ ಬಯಕೆಯನ್ನೂ ಶಿಷ್ಟಕ್ರಮದಲ್ಲಿ ತಿಳಿಸಿಹೇಳಿ ಎಂದು ಆ ಗಳಿಗೆಯಲ್ಲೂ ನಾನು ಅವರಿಗೆ ಹೇಳಿದೆ. ಕಳೆದ ಐದು ವರ್ಷಗಳಲ್ಲಿ ಇಡೀ ಮುಸ್ಲಿಂ ಭಾರತಲೋಕ ವಿಶೇಷ ಸಂಯಮಪೂರ್ಣವಾಗಿ ವರ್ತಿಸಿದೆ; ಜನನಾಯಕರು ತಮ್ಮ ತಮ್ಮ ಜನ ಸಮುದಾಯದ ದಂಗೆಕೋರ ಗುಂಪುಗಳನ್ನೆಲ್ಲ ನಿಗ್ರಹಿಸಿ ಇಟ್ಟಿದ್ದಾರೆ; ಇದನ್ನು ಒಪ್ಪಲೇಬೇಕು.

ಶಾಂತಿಯ ಕರಾರುಗಳೂ ಅವನ್ನು ಸಮರ್ಥಿಸಿ ತಾವು ಮಾಡಿದ ವ್ಯಾಖ್ಯಾನವೂ ಭಾರತದ ಮುಸಲ್ಮಾನರನ್ನು ದಂಗುಬಡಿಸಿವೆ. ಆ ಹೊಡೆತದಿಂದ ಚೇತರಿಸಿಕೊಳ್ಳುವುದು ಅವರಿಗೆ ಬಹಳ ಕಷ್ಟ. ಕರಾರುಗಳು ಮಂತ್ರಿಗಳು ಮಾಡಿದ ವಾಗ್ದಾನಗಳಿಗೆ, ವ್ಯತಿರೇಕವಾಗಿವೆ; ಮುಸಲ್ಮಾನರ ಮನೋಭಾವನೆಯನ್ನು ಪೂರ್ಣವಾಗಿ ಅಸಡ್ಡೆ ಮಾಡಿವೆ. ನನ್ನ ದೇಶ ಭ್ರಾತೃಗಳಾದ ಮುಸಲ್ಮಾನರ ಜೊತೆಗೆ ಪೂರ್ಣ ಮೈತ್ರಿಯಿಂದ ಇರಬಯಸುವ ಹಿಂದು ನಾನು. ಅವರಿಗೆ ವಿಪತ್ತು ಬಂದಾಗ ಅವರ ಜೊತೆ ನಿಲ್ಲದಿದ್ದರೆ ನಾನು ಭಾರತ ಪುತ್ರನಾಗಲು ಅನರ್ಹನಾದೇನು. ಎಂದು ಅತ್ಯಂತ ವಿನಯದಿಂದ ಹೇಳುತ್ತೇನೆ. ಅವರ ಅಭೀಷ್ಟ ನ್ಯಾಯವಾದುದು. ಅವರ ಮನೋಭಾವನೆಗೆ ಗೌರವಕೊಡುವುದಾದರೆ "ತುರ್ಕಸ್ತಾನವನ್ನು ದಂಡಿಸಬಾರದು." ತಮ್ಮ ಖಲೀಫನನ್ನೇ ಶಿಕ್ಷೆಗೆ ಗುರಿಮಾಡಲೆಂದು, ಆತನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಬೇಕೆಂದು ಮುಸ್ಲಿಂ ಸಿಪಾಯಿಗಳು ಯುದ್ಧ ಮಾಡಿದರೆ? ಉಂಟೇ? ಮುಸ್ಲಿಮರ ನಡತೆ ಈ ಐದು ವರ್ಷಗಳಲ್ಲಿ ಒಂದೇ ಬಗೆಯಾಗಿದೆ.

ಸಾಮ್ರಾಜ್ಯದಲ್ಲಿ ನನಗೆ ವಿಶ್ವಾಸವಿದೆ. ಅಂತೆಯೇ ಮುಸಲ್ಮಾನರ ಭಾವನೆಯನ್ನು ಹೀಗೆ ಕ್ರೂರವಾಗಿ ಸಾಯಗೊಳಿಸಿದುದನ್ನು ನಿರೋಧಿಸಬೇಕಾದುದು ನನ್ನ ಕರ್ತವ್ಯ. ನನಗೆ ತಿಳಿದ ಮಟ್ಟಿಗೆ, ಹಿಂದುಗಳು ಮುಸಲ್ಮಾನರು ಇಬ್ಬರಿಗೂ ಬ್ರಿಟಿಷರ ನ್ಯಾಯಬುದ್ಧಿಯಲ್ಲಿ ನಂಬಿಕೆ ಹೋಗಿದೆ. ಹಂಟರ್ ಕಮಿಟಿಯ ಬಹುಜನರ ವರದಿ, ಅದರ ಬಗ್ಗೆ ತಾವು ಬರೆದದ್ದು, ಅದಕ್ಕೆ ಮಾಂಟೆಗ್ಯೂ ಕೊಟ್ಟ ಉತ್ತರ ಎಲ್ಲವೂ, ಅವಿಶ್ವಾಸವನ್ನು ಇನ್ನೂ ಹೆಚ್ಚಿಸಿದವು.

ಇಂಥ ಸಂದರ್ಭದಲ್ಲಿ ನನ್ನಂಥವನಿಗೆ ಒಂದೇ ದಾರಿ : ನಿರಾಶೆಯಿಂದ ಬ್ರಿಟಿಷ್ ಆಡಳಿತದೊಡನೆ ಎಲ್ಲ ಸಂಬಂಧವನ್ನೂ ಕತ್ತರಿಸಿಹಾಕುವದು, ಇಲ್ಲವೆ ಈಗಿರುವ ರಾಜ್ಯಾಂಗ ವಿಧಾನಗಳಲ್ಲಿ ಬ್ರಿಟಿಶರದೇ ಉತ್ತಮವೆಂದು ಇನ್ನೂ ನನಗೆ ಅನಿಸಿದರೆ, ಈಗ ಆಗಿರುವ ತಪ್ಪನ್ನು ತಿದ್ದಲು ತಕ್ಕ ಉಪಾಯಮಾಡಿ ವಿಶ್ವಾಸವನ್ನು ಪುನಃ ಸ್ಥಾಪಿಸಬೇಕು. ನನಗಿನ್ನೂ ಇದು ಉತ್ತಮವೆಂಬ ವಿಶ್ವಾಸ ಹೋಗಿಲ್ಲ. ನಾವು ಕಷ್ಟಸಹನೆಯ ಸಾಮರ್ಥ್ಯ ತೋರಿಸಿದರೆ ಯಾವು ದಾದರೊಂದು ರೀತಿಯಲ್ಲಿ ನ್ಯಾಯವಾದೀತೆಂಬ ಆಸೆ ಈಗಲೂ ನನಗೆ ಇಲ್ಲದಿಲ್ಲ. ಈ ರಾಜ್ಯಾಂಗ ವಿಧಾನದ ಬಗ್ಗೆ ನನ್ನ ಭಾವನೆಯೇನು ಗೊತ್ತೇ ? ತಮ್ಮ ಕಾಲಮೇಲೆ ನಿಲ್ಲಬಲ್ಲವರಿಗೆ ಅದು ಆಸರೆ ಕೊಡುತ್ತದೆ. ಬಡವರನ್ನು ಅದು ರಕ್ಷಿಸುತ್ತದೆಂದು ನಾನು ನಂಬಿಲ್ಲ, ಬಲಿಷ್ಟರಿಗೆ. ತಮ್ಮ ಬಲವನ್ನು ಕಾಯ್ದು ಕೊಳ್ಳಲಿಕ್ಕೂ ಬೆಳೆಸಿಕೊಳ್ಳಲಿಕ್ಕೂ ಅವಕಾಶಕೊಡುತ್ತದೆ. ದುರ್ಬಲರು ಪುಡಿ ಪುಡಿಯಾಗುತ್ತಾರೆ.

ಹೀಗೆ ನಾನು ನಂಬಿರುವುದರಿಂದಲೇ ಮುಸ್ಲೀಮರ ಮನೋಭಾವನೆಗನು ಸಾರವಾಗಿಯೂ ಮಂತ್ರಿಗಳ ವಾಗ್ದಾನಗಳಂತೆಯೂ ಶಾಂತಿಯ ಕರಾರುಗಳನ್ನು ಪರಿವರ್ತನೆಗೊಳಿಸದ ಪಕ್ಷದಲ್ಲಿ ತಮ್ಮ ಆಡಳಿತದೊಂದಿಗೆ ಸಹಕರಿಸಬೇಡಿ ಎಂದು ಮುಸಲ್ಮಾನ ಗೆಳೆಯರಿಗೆ ಸೂಚಿಸಿದ್ದೇನೆ; ಅವರ ಜೊತೆಗೆ ಸೇರಿ ಎಂದು ಹಿಂದುಗಳಿಗೆ ಹೇಳಿದ್ದೇನೆ.

ಈ ಅನ್ಯಾಯಕ್ಕೆ ಮುಖ್ಯ ಕಾರಣರಾಗದಿದ್ದರೂ ಬ್ರಿಟಿಷ್ ಮಂತ್ರಿಗಳು ಪಾಲುಗಾರರಂತೂ ಆಗಿದ್ದಾರೆ. ಅವರು ಮಾಡಿದ ಈ ಘೋರ ಅನ್ಯಾಯ ವನ್ನು ಬಲವಾಗಿ ಖಂಡಿಸಲು ಮುಸಲ್ಮಾನರಿಗೆ ಮೂರು ದಾರಿ ಇದ್ದವು.

೧. ಹಿಂಸೆ ಮಾಡುವುದು.
೨. ಇಡಿಗೆ ಇಡೀ ದೇಶತ್ಯಾಗಮಾಡುವುದು.
೩. ಸರಕಾರಕ್ಕೆ ಸಹಕಾರನೀಡದೆ ಈ ಅನ್ಯಾಯಕ್ಕೆ ಭಾಗಿಗಳಾಗ ದಿರುವುದು.

ಮುಸಲ್ಮಾನರಲ್ಲಿ ವಿಚಾರವಂತರಲ್ಲದ ಧೀರಾಗ್ರಣಿಗಳು ಕೆಲವರು ಹಿಂಸೆಯ ಹಾದಿ ತುಳಿಯಬಯಸಿದ ಕಾಲವೂ ಒಂದಿತ್ತು; ಅದು ತಮಗೆ ತಿಳಿದೇ ಇರಬೇಕು. ಈಗಲೂ ಹಿಜ್ರಾತ್ ( ದೇಶತ್ಯಾಗ ) ರಣಘೋಷ ಕೇಳಿಬರುತ್ತಲೇ

ಇದೆ. ತಾಳ್ಮೆಯಿಂದ ವಾದ ಮಾಡಿಮಾಡಿ, ಹಿಂಸೆಯಿಂದ ಈ ಗುಂಪನ್ನು ತಿರುಗಿಸುವ ಪ್ರಯತ್ನದಲ್ಲಿ ಸಫಲನಾದೆ ಎನ್ನುವ ಧೈರ್ಯ ಮಾಡುತ್ತೇನೆ. ನೀತಿ ಬೋಧೆಯಿಂದ ಅವರನ್ನು ತಿರುಗಿಸಿಕೊಳ್ಳುವ ಪ್ರಯತ್ನ ಮಾಡಲಿಲ್ಲವೆಂದು ಒಪ್ಪಿಕೊಳ್ಳುತ್ತೇನೆ. ಲಾಭ-ನಷ್ಟದ ಲೆಕ್ಕಾಚಾರಮಾಡಿ ಒಪ್ಪಿಸಿದೆ. ಹೇಗಾದರೂ ಆಗಲಿ, ಸದ್ಯ ಹಿಂಸೆ ನಿಂತಿತು. ದೇಶತ್ಯಾಗದ ಪಕ್ಷ ಪೂರ್ತಿ ನಿಂತು ಹೋಗದಿದ್ದರೂ ಸ್ತಂಭಿತವಾಗಿದೆ. ತ್ಯಾಗಮಯವಾದ ಋಜುಮಾರ್ಗವೊಂದನ್ನು ಜನರ ಕಣ್ಣೆದುರಿಗೆ ಇಡದಿದ್ದರೆ, ಸಾರ್ವಜನಿಕರು ಆ ಮಾರ್ಗ ಹಿಡಿದರೆ ಗೆಲವು ಖಂಡಿತ ಎಂಬ ಭರವಸೆ ಇರದಿದ್ದರೆ, ಹಿಂಸೆಯ ಕಾಳ್ಗಿಚ್ಚು ಭಗ್ಗೆಂದು ಹತ್ತಿ ಉರಿಯುತ್ತಿತ್ತು. ಎಷ್ಟು ಪ್ರಬಲವಾಗಿ ದಮನಮಾಡಿದರೂ ಅದು ಆರುತ್ತಿರಲಿಲ್ಲ ಎನ್ನಬಲ್ಲೆ. ಅಸಹಕಾರವೇ ಅಂಥ ಗಂಭೀರವಾದ ನಿಯಮಬದ್ಧವಾದ ಏಕೈಕ ಋಜುಮಾರ್ಗ. ಅನ್ಯಾಯ ಮಾರ್ಗ ಹಿಡಿದ ಅರಸನ ದೊರೆತನಕ್ಕೆ ನೆರವಾಗದಿರುವ ಅಧಿಕಾರ ಪ್ರಜೆಗೆ ಅನಾದಿಕಾಲದಿಂದಲೂ ಇದೆ.

ಹೀಗೆ ಜನಸಮುದಾಯ ಮಾಡಬಹುದಾದ ಅಸಹಕಾರದಲ್ಲಿ ಘೋರ ಆಪತ್ತೂ ಇದೆ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಹಿಂದುಸ್ಥಾನದ ಮುಸಲ್ಮಾನರಿಗೆ ಬಂದಿರುವಂಥ ಮಹದ್ವಿಪತ್ತಿನಲ್ಲಿ ಆಪದ್ರಹಿತವಾದ ಕಾರ್ಯ ಯಾವುದೂ ನಿರೀಕ್ಷಿತ ಫಲವನ್ನು ಕೊಡಲಾರದು. ಹಲಕೆಲವು ಆಪತ್ತಿಗೆ ಈಗ ಸಿದ್ಧರಾಗದಿದ್ದರೆ ಮುಂದೆ ಹೆಚ್ಚಿನ ಕಷ್ಟಕ್ಕೆ, ಶಾಂತಿವ್ಯವಸ್ಥೆಯ ವಿನಾಶಕ್ಕೆ ಔತಣಕೊಟ್ಟಂತಾದೀತು.

ಆದರೂ ಈ ಅಸಹಕಾರವನ್ನು ತಪ್ಪಿಸಲು ಒಂದು ದಾರಿಯಿದೆ. ತಮಗೆ ಮೊದಲು ಇದ್ದ ವೈಸರಾಯ ದಕ್ಷಿಣ ಆಫ್ರಿಕದ ವಿಷಯದಲ್ಲಿ ಮಾಡಿದ ಹಾಗೆ, ಮುಸ್ಲಿಮರ ಬಿನ್ನಹದಲ್ಲಿ ಬೇಡಿರುವ ಹಾಗೆ, ತಾವೇ ಈ ಚಳುವಳಿಗೆ ಮುಂದಾಳಾಗಿ ಬನ್ನಿ. ಹಾಗೆ ಮಾಡಲು ತಮಗೆ ಸುಳಿವು ಸಿಗದಿದ್ದರೆ, ಅಸಹಕಾರ ಅಗತ್ಯವೇ ಆದರೆ, ನನ್ನ ಸೂಚನೆಗೆ ಒಪ್ಪಿದವರೂ ನಾನೂ ಕೇವಲ ಕರ್ತವ್ಯನಿಷ್ಠರಾಗಿದೇವೆಂದೂ ಬೇರಾವ ಕ್ಷುದ್ರ ಕಾರಣವೂ ಇಲ್ಲವೆಂದೂ ತಾವು ತಿಳಿದುಕೊಂಡೀರಿ, ಎಂದು ಆಶಿಸುತ್ತೇನೆ.

ಲಾಬರ್ನಮ್ ರಸ್ತೇ
ಗಾಂದೇವಿ, ಬೊಂಬಾಯಿ
೨೨ ಜೂನ್ ೧೯೨೦

ತಮ್ಮ ವಿಶ್ವಾಸವಂತ
ಸೇವಕ
ಮೋ. ಕ. ಗಾಂಧಿ

## ಅಗಸ್ಟ ೧

[ ಅಸಹಕಾರ ಚಳುವಳಿ ನಿರೀಕ್ಷಿಸಿದಂತೆ ಮೊದಲಾಯಿತು. ಅಂಕುರಾರ್ಪಣ ಮಾಡುತ್ತ ಗಾಂಧೀಜೀ ವೈಸರಾಯರಿಗೆ ಈ ಪತ್ರ ಬರೆದರು. ]

‘ ದಕ್ಷಿಣ ಆಫ್ರಿಕದಲ್ಲಿ ನಾ ಮಾಡಿದ ಸಮಾಜಸೇವೆಗೆಂದು ಹಿಂದಿನ ವೈಸರಾಯ ನನಗೆ ಕೊಟ್ಟ ಕೈಸರ್‌ಹಿಂದ್ ಬಂಗಾರದ ಪದಕವನ್ನೂ, ೧೯೦೬ರಲ್ಲಿ ಭಾರತೀಯ ಸ್ವಯಂಸೇವಕ ಶುಶ್ರೂಷಾದಳದ ನಾಯಕನಾಗಿ ನಾ ಮಾಡಿದ ಸೇವೆಗಾಗಿ ದಕ್ಷಿಣ ಆಫ್ರಿಕದಲ್ಲಿ ಕೊಟ್ಟ ಜೂಲು ಯುದ್ಧ ಪದಕವನ್ನೂ, ೧೮೯೯—೧೯೦೦ ರ ಬೋಅರ್ ಯುದ್ಧದಲ್ಲಿ ಭಾರತೀಯ ವಾಹಕ ಸೇವಾದಳದ ಉಪನಾಯಕನಾಗಿ ಮಾಡಿದ ಕಾರ್ಯಕ್ಕಾಗಿ ಕೊಟ್ಟ ಬೋಅರ್ ಯುದ್ಧ ಪದಕವನ್ನೂ ಹಿಂದಿರುಗಿ ಕಳಿಸುತ್ತಿದೇನೆ. ಮನಸ್ಸಿಗೆ ನೋವಾಗದೆ ಕಳಿಸುತ್ತಿಲ್ಲ. ಖಿಲಾಫತ್ ಚಳುವಳಿಯ ಅಂಗವಾಗಿ ಇವತ್ತಿನಿಂದ ಹೂಡುವ ಆಸಹಕಾರದ ಯೋಜನೆಗೆ ಅನುಸಾರವಾಗಿ ಈ ಪದಕಗಳನ್ನು ಹಿಂದಕ್ಕೆ ಕಳಿಸುವ ಸಾಹಸಮಾಡಿದೇನೆ. ಈ ಗೌರವಗಳೆಲ್ಲ ನನಗೆ ಅಮೂಲ್ಯವೇ. ಆದರೂ ನನ್ನ ಮುಸ್ಲಿಂ ಸೋದರರ ಧಾರ್ಮಿಕ ಭಾವನೆಗೆ ಗಾಯವಾಗಿರುವ ತನಕ ನಿಶ್ಚಿಂತನಾಗಿ ನಾನವನ್ನು ಹೊರಲಾರೆ. ಕಳೆದ ತಿಂಗಳು ನಡೆದ ಸಂಗತಿಗಳನ್ನು ನೋಡಿದರೆ ಖಿಲಾಫತ್ ಪ್ರಕರಣದಲ್ಲಿ ಬ್ರಿಟಿಷ್ ಸರಕಾರ ಅಪ್ರಮಾಣಿಕ, ಅನೀತಿವಂತ, ಅನ್ಯಾಯಪೂರ್ಣಮಾರ್ಗದಲ್ಲಿ ನಡೆದಿದೆಯೆಂಬುದು ನನ್ನ ಮನಸ್ಸಿಗೆ ಖಚಿತವಾಗಿದೆ. ತನ್ನ ದುರ್ನೀತಿಯನ್ನು ಸಮರ್ಥಿಸಲು ತಪ್ಪಿನ ಮೇಲೆ ತಪ್ಪು ಮಾಡುತ್ತಿದೆ. ಇಂಧ ಸರಕಾರದಲ್ಲಿ ನನಗೆ ಗೌರವವಾಗಲಿ, ವಿಶ್ವಾಸವಾಗಲಿ, ಸಾಧ್ಯವಿಲ್ಲ.

ಸಾಮ್ರಾಜ್ಯ ಸರಕಾರವೂ ನಿಮ್ಮ ಸರಕಾರವೂ ಪಂಜಾಬಿನ ಬಗ್ಗೆ ತೋರಿದ ಧೋರಣೆ ನನ್ನ ಅಸಮಾಧಾನವನ್ನು ಹೆಚ್ಚಿಸಲಿಕ್ಕೆ ಮತ್ತೊಂದು ಕಾರಣ. ೧೯೧೯ ರ ಎಪ್ರಿಲ್ ದುರಂತಗಳ ಕಾರಣವನ್ನು ಕಂಡುಹಿಡಿಯಲು ಕಾಂಗ್ರೆಸ್ಸು ನೇಮಿಸಿದ ವಿಚಾರಣಾ ಸಮಿತಿಯಲ್ಲಿ ನಾನೂ ಒಬ್ಬ. ತಮಗೆ ಇದು

ಗೊತ್ತಿದೆ. ಪಂಜಾಬಿನ ಗವರ್ನರ್ ಆಗಿರಲು ಸರ್ ಮೈಕೇಲ್ ಓಡಯರ್ ತೀರಾ ಅನರ್ಹನಾಗಿದ್ದನೆಂದೂ ಅವನ ರೀತಿಯೇ ಅಮೃತಸರದ ಜನ ಸಮುದಾಯವನ್ನು ಕೆರಳಿಸಲು ಕಾರಣವಾಯಿತೆಂದೂ ನನ್ನ ಸಿದ್ಧಾಂತ. ಜನ ಮಾಡಿದ್ದು ಅತಿರೇಕವೆ, ಅಕ್ಷಮ್ಯವೇ, ನಿಜ. ಬೆಂಕಿಯಿಟ್ಟದ್ದು, ಏನೂ ಅರಿಯದ ಐವರು ಇಂಗ್ಲೀಷರನ್ನು ಕೊಂದದ್ದು, ಶ್ರೀಮತಿ ಷೆರ್‌ವುಡ್‌ನ ಮೇಲೆ ಬಿದ್ದ ಹೇಡಿ ಕೆಲಸ ನಾಚಿಕೆಗೇಡು ಕೆಲಸ; ಎಲ್ಲವೂ ಅಧಿಕ ಪ್ರಸಂಗ. ಆದರೆ ದಳಪತಿ ಡಾಯರ್, ಕರ್ನಲ್ ಜಾನ್‌ಸನ್, ಕರ್ನಲ್ ಓಬ್ರಿಯನ್, ಬಾಸ್‌ವರ್ತ್ ಸ್ಮಿತ್, ರಾಯ್ ಶ್ರೀರಾಮಸೂದ್, ಮಾಲಿಕ್‌ಖಾನ್ ಮುಂತಾದ ಅಧಿಕಾರಿಗಳು ಅನುಸರಿಸಿದ ಶಿಕ್ಷಾಕ್ರಮ ಜನರು ಮಾಡಿದ ತಪ್ಪಿಗೆ ಹಸ್ತಿಮಶಕದಂತೆ ಪ್ರಮಾಣಹೀನ, ಈಗಿನ ಕಾಲದಲ್ಲಿ ಯಾವುದಕ್ಕೂ ಸಾಟಿಯಿಲ್ಲದಂಥ ಮನಃಪೂರ್ವಕ ಕ್ರೌರ್ಯ ನಿಷ್ಕಾರುಣ್ಯ. ಅಧಿಕಾರಿಗಳು ಮಾಡಿದ ತಪ್ಪನ್ನು ತಾವು ಅಸಡ್ಡೆ ಮಾಡಿದ ರೀತಿ, ಸರ್ ಮೈಕೆಲ್ ಓಡಯರಿಗೆ ನೀವು ತೋರಿಸಿದ ಕ್ಷಮೆ, ಮೂಂಟೆಗೂ ಬರೆದ ವರದಿ, ಎಲ್ಲಕ್ಕಿಂತ ಹೆಚ್ಚಾಗಿ 'ಶ್ರೀಮಂತ ಸಭೆ' ಯಲ್ಲಿ ಪಂಜಾಬ ಘಟನೆಗಳ ಬಗ್ಗೆ ತೋರಿಸಿದ ಅಜ್ಞಾನ, ಭಾರತೀಯರ ಮನೋಭಾವನೆಗೆ ತೋರಿದ ಸಂಪೂರ್ಣ ತಿರಸ್ಕಾರ—ಎಲ್ಲವೂ ಸೇರಿ ಸಾಮ್ರಾಜ್ಯದ ಭವಿಷ್ಯದ ಬಗ್ಗೆ ನನಗೆ ಸಂದೇಹ ಮೂಡಿಸಿವೆ; ಈಗಿನ ಸರಕಾರಕ್ಕೆ ದೂರ ಮಾಡಿವೆ, ಇದುವರೆಗೆ ನೀಡಿದ ಮನಃಪೂರ್ಣವಾದ ವಿಶ್ವಾಸಪೂರ್ವಕವಾದ ಸಹಕಾರವನ್ನು ನೀಡಲಾರದಂತೆ ಮಾಡಿವೆ.

ಭಾರತ ಸರಕಾರದಂಥ ಪ್ರಜಾಹಿತ ಪರಾಙ್ಮುಖವಾದ ಸರಕಾರವನ್ನು ಪರಿತಾಪವೃತ್ತಿಗೆ ಎಳೆಯದ ಅರ್ಜಿ—ಅಹವಾಲುಗಳ ಸಾಮಾನ್ಯಮಾರ್ಗ ಸಾಲದೆಂದು ನನ್ನ ನಮ್ರ ಅಭಿಪ್ರಾಯ. ಐರೋಪ್ಯ ದೇಶಗಳಲ್ಲಾಗಿದ್ದರೆ ಖಿಲಾಫತಿನಂಥ ಅನ್ಯಾಯಕ್ಕೆ ರಕ್ತಪಾತ, ಕ್ರಾಂತಿ ಆಗಿಬಿಡುತ್ತಿತ್ತು. ಇಂಥ ಅನ್ಯಾಯಗಳಿಂದ ಆಗುವ ರಾಷ್ಟ್ರೀಯ ವೀರ್ಯಹಾನಿಗೆ, ಏನೇ ಆಗಲಿ, ಅವರು ಅವಕಾಶ ಕೊಡದೆ ವಿರೋಧಿಸುತ್ತಿದ್ದರು. ಆದ್ದರಿಂದ ಸರಕಾರದ ಸಂಬಂಧ ಬಿಡಲಿಷ್ಟವಿದ್ದವರಿಗೆ ಅಸಹಕಾರದ ಉಪಾಯನ್ನು ಸೂಚಿಸಿದೇನೆ. ಹಿಂಸೆಯ ಸೋಂಕು ಇಲ್ಲದೆ ಕ್ರಮವಾಗಿ ನಡೆದರೆ ಅಸಹಕಾರ, ಸರಕಾರವನ್ನು ಹಿಂದಾಗಿರುವ ಅನ್ಯಾಯವನ್ನು ಸರಿಪಡಿಸುವಂತೆ ಮೂಗುದಾರ ಹಿಡಿದು ಮಾಡಿಸೀತು

ಜನರನ್ನು ನನ್ನ ಜೊತೆಗೆ ಕರೆದೊಯ್ಯಬಲ್ಲಷ್ಟರ ವರೆಗೆ ನಾನು ಅಸಹಕಾರ ಮಾಡುತ್ತೇನೆ; ಆದರೂ ನೀವು ನ್ಯಾಯಮಾರ್ಗವಿಡಿರಿ ಎಂಬ ಆಸೆ ಬಿಡಲಾರೆ. ಆದ್ದರಿಂದ ಜನನಾಯಕರನ್ನು ಸಭೆಸೇರಿಸಿ ಸಮಾಲೋಚನೆ ಮಾಡಿ, ಮುಸಲ್ಮಾನರ ಮನಸ್ಸಂತೋಷಪಡಿಸುವ, ದುರ್ದೈವಿ ಪಂಜಾಬಿಗೆ ಏನಾದರೂ ಪರಿಹಾರಮಾಡುವ ದಾರಿ ಕಂಡುಹಿಡಿಯಿರಿ ಎಂದು ತಮ್ಮನ್ನು ಮರ್ಯಾದೆಯಿಂದ ಪ್ರಾರ್ಥಿಸುತ್ತೇನೆ.

ಅಗಸ್ಟ ೧, ತಮ್ಮ,
೧೯೨೦ ಮೋ. ಕ. ಗಾಂಧಿ

---

# ಹಿಂದುಸ್ಥಾನದಲ್ಲಿರುವ ಪ್ರತಿಯೊಬ್ಬ ಇಂಗ್ಲೀಷನಿಗೆ-

## ೧

ಗೆಳೆಯ,

ಪ್ರತಿಯೊಬ್ಬ ಇಂಗ್ಲೀಷನೂ ಈ ಬಿನ್ನಹವನ್ನು ನೋಡಲಿ, ಇದನ್ನು ಆಲೋಚಿಸಲಿ ಎಂದು ಬಯಸುತ್ತೇನೆ.

ನನ್ನ ಪರಿಚಯ ಮಾಡಿಕೊಡಲೆ ? ಸತತವಾಗಿ ಈ ೨೯ ವರ್ಷ ಕಾಲ ಮತ್ತಾರಾದರೂ ಆಗಿದ್ದರೆ ಇದಿರು ಬೀಳುವಂತೆ ಕೆರಳಿಸುತ್ತಿದ್ದ ಸಂದರ್ಭಗಳಲ್ಲೂ, ಬಿಡದೆ ಬ್ರಿಟಿಷ್ ಸರಕಾರದೊಂದಿಗೆ ನನ್ನಂತೆ ಸಹಕರಿಸಿದವರು ಯಾರೂ ಇಲ್ಲ; ನಿಮ್ಮ ಶಾಸನಗಳ, ಶಿಕ್ಷೆಯ, ಭೀತಿಯಿಂದಾಗಲಿ ಮತ್ತಾವ ಸ್ವಾರ್ಥದಿಂದಾಗಲಿ ನಾನು ಸಹಕರಿಸಲಿಲ್ಲ; ನನ್ನ ಮಾತನ್ನು ನಂಬಿ ಅಸಹಕಾರ, ಸ್ವಯಂಪ್ರೇರಿತವಾದದ್ದು; ಆತ್ಮಸಂತೋಷದ್ದು; ಬ್ರಿಟಿಷ್ ಸರಕಾರದ ಕಾರ್ಯಕ್ರಮ ಒಟ್ಟಿನಲ್ಲಿ ಭಾರತಕ್ಕೆ ಹಿತಕಾರಿಯೆಂಬ ನಂಬಿಕೆಯಿಂದ ಮಾಡಿದ್ದು.

ಸಾಮ್ರಾಜ್ಯಕ್ಕಾಗಿ ನಾಲ್ಕುಸಲ ನಾನು ಪ್ರಾಣಾಪಾಯಕ್ಕೆ ಸಿದ್ಧನಾದೆ. ಬೋಅರ್ ಯುದ್ಧದಲ್ಲಿ ಶುಶ್ರೂಷಾದಳದ ನಾಯಕನಾಗಿದ್ದಾಗ— ಆ ದಳದ ಸೇವೆಯನ್ನು ದಳಪತಿ ಬುಲ್ಲರ್ ಹೊಗಳಿದ್ದಾನೆ; ನೇಟಾಲಿನಲ್ಲಿ ಜೂಲೂ ದಂಗೆಯಾದಾಗ ಮತ್ತೊಮ್ಮೆ ಅಂಥದೇ ದಳವನ್ನು ಏರ್ಪಡಿಸಿದಾಗ; ಕಳೆದ ಯುದ್ಧದಲ್ಲಿ ಮತ್ತೆ ಶುಶ್ರೂಷಾದಳವನ್ನು ಏರ್ಪಡಿಸಲು ಹೆಣಗಿ, ಆ ಶಿಕ್ಷಣದ ಆಯಾಸದಿಂದ ರೋಗಗ್ರಸ್ತನಾದಾಗ; ಲಾರ್ಡ ಚೆಮ್ಸ್‌ಫೋರ್ಡ್‌ಗೆ ದಿಲ್ಲಿಯ ಯುದ್ಧ ಸಮ್ಮೇಳನದಲ್ಲಿ ನಾ ಕೊಟ್ಟ ಮಾತಿನಂತೆ ಕೈರಾ ಜಿಲ್ಲೆಯಲ್ಲೂ ದಂಡಿಗೆ ಆಳು ಕೂಡಿಸಲು ಹೊರಟು, ಆಯಾಸಕರವಾದ ದೀರ್ಘ ಪ್ರಮಾಣಗಳನ್ನು ಮಾಡಿ, ತತ್ಪರಿಣಾಮವಾಗಿ ಆಮಶೌಚದ ಗಂಡಾಂತರಕ್ಕೆ ಗುರಿಯಾದಾಗ. ಹೀಗೆ ನಾಲ್ಕುಸಲ ಪ್ರಾಣ, ಗಂಡಾಂತರಕ್ಕೆ ಸಿದ್ಧವಾದುದು ಇಂಥ ಕೃತಿಗಳಿಂದ ಸಾಮ್ರಾಜ್ಯದಲ್ಲಿ ನನ್ನ ದೇಶಕ್ಕೆ ಸಮಸ್ಥಾನ ದೊರೆತೀತು ಎಂಬ ವಿಶ್ವಾಸದಿಂದ ಮೊನ್ನೆ ಡಿಸೆಂಬರಿನಲ್ಲೂ ಪರಸ್ಪರ ವಿಶ್ವಾಸಪೂರ್ಣ ಸಹಕಾರಕ್ಕಾಗಿ ಬೇಡಿ ಕೊಂಡೆ. ಲಾಯಿಡ್‌ಜಾರ್ಜ್ ತಾನು ಮುಸ್ಲಿಮರಿಗೆ ಮಾಡಿದ ವಾಗ್ದಾನದಂತೆ ನಡೆದಾನೆಂದೂ, ಪಂಜಾಬಿನಲ್ಲಿ ಅಧಿಕಾರಿಗಳು ಮಾಡಿದ ಅತಿವರ್ತನೆಯನ್ನು ಬಯಲಿಗೆಳೆದರೆ ಪಂಜಾಬಿನಲ್ಲಿ ಜನಕ್ಕೆ ಪರಿಹಾರದೊರೆತೀತೆಂದೂ ನಂಬಿದೆ. ಲಾಯಡ್ ಜಾರ್ಜ್ ಹೀಗೆ ದ್ರೋಹ ಬಗೆದಾನೆಂದಾಗಲಿ ನೀವು ಅದನ್ನು ಮೆಚ್ಚೀರೆಂದಾಗಲಿ ಪಂಜಾಬಿನ ಅತಿವರ್ತನೆಯನ್ನು ಕ್ಷಮಿಸಿಯಾರೆಂದಾಗಲಿ ನನ ಗನಿಸಿರಲಿಲ್ಲ. ಇದರಿಂದ ಸರಕಾರದ ಸದುದ್ದೇಶದಲ್ಲೂ ಸರಕಾರಕ್ಕೆ ಬೆಂಬಲ ವಾಗಿರುವ ಜನಾಂಗದಲ್ಲೂ ನನಗಿದ್ದ ನಂಬಿಗೆ ನುಚ್ಚುನುರಿಯಾಗಿ ಹೋಯಿತು.

ನಿಮ್ಮ ಸದುದ್ದೇಶದಲ್ಲಿ ನನಗೆ ನಂಬಿಗೆ ಹೋದರೂ ನಿಮ್ಮ ಧೀರತನ ವನ್ನು ನಾ ಬಲ್ಲೆ. ನ್ಯಾಯಕ್ಕೆ, ತರ್ಕಕ್ಕೆ ಮಣಿಯದವರು ನೀವು ಧೀರತನಕ್ಕೆ ಮಣಿಯುತ್ತೀರಿ.

ಈ ಸಾಮ್ರಾಜ್ಯ ಹಿಂಮಸ್ಥಾನಕ್ಕೆ ಎಷ್ಟು ಹೊರೆಯೋ ನೋಡಿ:

ಬ್ರಿಟನ್ನಿನ ಲಾಭಕ್ಕಾಗಿ ಭಾರತದ ಸಂಪತ್ತನ್ನು ಸುಲಿಯುವುದು.

ದಿನೇದಿನೇ ಹೆಚ್ಚುತ್ತಿರುವ ದಂಡಿನ ವೆಚ್ಚ, ಜಗತ್ತಿನಲ್ಲೇ ಅತ್ಯಂತ ದುಬಾರಿಯಾದ ಅಧಿಕಾರಿ ವರ್ಗ.

ಭಾರತದ ಬಡತನವನ್ನು ಸಡ್ಡೆಮಾಡದೆ ಅತಿವ್ಯಯ ಮಾಡುತ್ತಿರುವ ಪ್ರಭುತ್ವ ಶಾಖೆಗಳು.

ನಿಃಶಸ್ತ್ರೀಕರಣ, ಆದರಿಂದ ಇಡೀ ಜನಾಂಗದ ವೀರ್ಯನಾಶ. ಇಲ್ಲದಿದ್ದರೆ ಶಸ್ತ್ರಪ್ರಾಣಿಯಾದ ಜನಾಂಗ ನಮ್ಮ ನಡುವೆ ಇರುವ ನಿಮ್ಮವರು ಕೆಲವರನ್ನು ಪ್ರಾಣಾಪಾಯಕ್ಕೆ ಗುರಿಮಾಡೀತಲ್ಲ.

ತಲೆಭಾರವಾದ ಈ ಆಡಳಿತವನ್ನು ನಡೆಸಲು ಮಾದಕದ್ರವ್ಯ ವ್ಯಾಪಾರ.

ರಾಷ್ಟ್ರದ ಸಂಕಟವನ್ನು ಹೊರಗೆಡಹಬಯಸುವ, ದಿನದಿನಾಭಿವೃದ್ಧಿಗೊಳ್ಳುವ ಚಳುವಳಿಯನ್ನು ಅದುಮಿಹಾಕಲೆಂದು ದಿನ ದಿನವೂ ಹೇರುತ್ತಿರುವ ದೋರ್ದಂಡ ಶಾಸನ ಪರಂಪರೆ.

ನಿಮ್ಮ ದೇಶಗಳಲ್ಲಿ ಭಾರತೀಯರಿಗೆ ನೀವು ಮಾಡುವ ಅಪಮಾನ.

ಪಂಜಾಬ ಆಡಳಿತವನ್ನು ಆಕಾಶಕ್ಕೇರಿಸಿ, ಮುಸಲ್ಮಾನರ ಭಾವನೆಯನ್ನು ಧಿಕ್ಕರಿಸಿ ನಮ್ಮ ಮನಸ್ಸಿಗೆ ಮಾಡಿದ ಗಾಯ.

ನಿಮ್ಮೊಡನೆ ಯುದ್ಧಮಾಡಿ ನಿಮ್ಮ ಕೈಯಿಂದ ರಾಜದಂಡವನ್ನು ಕಿತ್ತುಕೊಂಡರೆ ನಿಮಗೆ ಚಿಂತೆಯಿಲ್ಲ; ನಾ ಬಲ್ಲೆ. ನಾವು ಹಾಗೆ ಮಾಡಲಾರೆವು, ಮುಖಾಮುಖಿ ನಿಂತು ನ್ಯಾಯವಾದ ಯುದ್ಧವನ್ನು ಮಾಡಲಾರದಂತೆ ಮಾಡಿದಿರಿ ನಮ್ಮನ್ನು; ಇದನ್ನೂ ನೀವೂ ಬಲ್ಲಿರಿ. ರಣರಂಗದ ಶೌರ್ಯ ನಮಗಿಲ್ಲವಾಗಿದೆ. ಆದರೆ ಆತ್ಮಬಲದ ಶೌರ್ಯ ನಮಗಿನ್ನೂ ಮುಕ್ತದ್ವಾರ. ಅದಕ್ಕೂ ನೀವು ಮಣಿದೀರೆಂದು ಬಲ್ಲೆ. ಆ ಶೌರ್ಯವನ್ನು ಹೊರಹೊಮ್ಮಿಸಲು ನಾನು ಯತ್ನಿಸುತ್ತಿದ್ದೇನೆ. ಅಸಹಕಾರವೆಂದರೆ ಆತ್ಮತ್ಯಾಗದ ಶಿಕ್ಷಣ; ಕಡಮೆಯಾದ್ದಲ್ಲ. ನಿಮ್ಮ ಆಡಳಿತದಿಂದ ನಮ್ಮ ಗುಲಾಮಗಿರಿ ದಿನೇದಿನೇ ಬೆಳೆಯುತ್ತಿದೆ. ತಿಳಿದೂ ತಿಳಿದೂ ನಿಮ್ಮೊಡನೆ ನಾವು ಸಹಕರಿಸಬೇಕೆ? ಏಕೆ? ನನ್ನ ಬಿನ್ನಹಕ್ಕೆ ಓಗೊಟ್ಟವರು ನನ್ನ ವ್ಯಕ್ತಿತ್ವಕ್ಕಾಗಿ ಓಗೊಡಲಿಲ್ಲ. ನನ್ನನ್ನೂ ಅಲಿ ಸೋದರರನ್ನು ನಿಮ್ಮ ಲೆಕ್ಕಕ್ಕೆ ಸೇರಿಸಬೇಡಿ. ಬುದ್ಧಿಯಿಲ್ಲದೆ ನಾನು ಮುಸ್ಲಿಮರ ವಿರುದ್ಧ ಕಾಳೆ-ಕೊಂಬು ಊದಿದರೂ ಅದಕ್ಕೆ ಬೆಂಬಲ ನನಗೆ ಸಿಗದು. ಅಲಿ ಸೋದರರು ಹಿಂದೂಗಳ ವಿರುದ್ಧ ಭೇರಿ ಬಾರಿಸಿದರೂ ಮುಸಲ್ಮಾನರನ್ನು ಹುರಿದುಂಬಿಸಲಾರರು. ನಿಮ್ಮ ಪಾದಾಘಾತದಿಂದ ನರಳುತ್ತಿರುವ ಜನಾಂಗದ ವಾಣಿ ನಾವು ಎಂದು—ನಮ್ಮ ಮಾತು ಕೇಳಲು ಸಾವಿರಾರುಜನ

ಬರುತ್ತಾರೆ. ನಾನಿದ್ದಂತೆ, ಈಗಲೂ ಇರುವಂತೆ, ಅಲಿಸೋದರರೂ ನಿಮ್ಮ ಗೆಳೆಯರಾಗಿದ್ದರು. ನಿಮ್ಮನ್ನು ದ್ವೇಷಿಸಕೂಡದೆಂದು ನನ್ನ ಧರ್ಮ ನಿಷೇಧಿಸುತ್ತದೆ. ನನಗೆ ಬಲವಿದ್ದರೂ ನಿಮ್ಮ ಮೇಲೆ ಕೈಯೆತ್ತಲಾರೆ. ನನ್ನ ಕಷ್ಟಸಹನೆಯಿಂದಲೇ ನಿಮ್ಮನ್ನು ಗೆಲ್ಲಲೆಣಿಸಿದ್ದೇನೆ. ಅವಕಾಶವಿದ್ದಿದ್ದರೆ ತಮ್ಮ ದೇಶ-ಧರ್ಮಗಳ ಸಲುವಾಗಿ ಅಲಿ ಸೋದರರು ಕತ್ತಿಯನ್ನು ಹಿರಿಯುತ್ತಿದ್ದರು. ಆದರೆ ಭಾರತದ ಜನ ತಮ್ಮ ಅಂತರಂಗವನ್ನು ತಿಳಿಸಲೂ ತಮ್ಮ ದುಃಸ್ಥಿತಿಗೆ ಪರಿಹಾರ ಕಂಡುಹಿಡಿಯಲೂ ಮಾಡುತ್ತಿದ್ದ ಪ್ರಯತ್ನದಲ್ಲಿ ನಾನೂ ಅವರೂ ಮಿಳಿತರಾಗಿ ಹೋಗಿದ್ದೇವೆ.

ಈ ರಾಷ್ಟ್ರೀಯ ಭಾವನಾತಿಶಯವನ್ನು ಕಡೆಗಾಣಿಸಲಿಕ್ಕೆ ಉಪಾಯವನ್ನು ನೀವು ಹುಡುಕುತ್ತಿದ್ದೀರಿ. ನಾ ಹೇಳಲೆ, ಅದಕ್ಕೆ ಒಂದೇದಾರಿ: ಅದರ ಕಾರಣಗಳನ್ನು ನಿರ್ಮೂಲಗೊಳಿಸಿ. ನಿಮಗಿನ್ನೂ ಆ ಅಧಿಕಾರವಿದೆ. ಭಾರತೀಯರಿಗಾದ ಅನ್ಯಾಯಕ್ಕಾಗಿ ನೀವು ಪ್ರಾಯಶ್ಚಿತ್ತಮಾಡಿಕೊಳ್ಳಬಲ್ಲಿರಿ. ಲಾಯಿಡ್‌ಜಾರ್ಜ್ ತನ್ನ ಮಾತನ್ನು ನಡೆಸಿಕೊಡುವಂತೆ ಬಲಾತ್ಕಾರ ಮಾಡಬಲ್ಲಿರಿ. ಆತ ಎಷ್ಟೋ ಅನುಕೂಲಸಿಂಧು ಸೂತ್ರಗಳನ್ನು ಬಲ್ಲ. ಈ ವೈಸರಾಯರನ್ನು ಬಲವಂತವಾಗಿ ಮನೆಗೆ ಕಳಿಸಿ ಈತನಿಗಿಂತ ಉತ್ತಮನಾದವನನ್ನು ಕರೆಯಿಸಬಲ್ಲಿರಿ. ಸರ್ ಮೈಕೇಲ್ ಓಡಯರ್ ಬಗ್ಗೆ ಜನರಲ್ ಡಯರ್ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಬದಲಿಸಿಕೊಳ್ಳಬಲ್ಲಿರಿ. ಜನರಿಂದ ಆರಿಸಲ್ಪಟ್ಟ ಸಮಸ್ತ ಪಂಥಗಳ ಪ್ರತಿನಿಧಿ ನಾಯಕರನ್ನು ಸಭೆಸೇರಿಸಿ, ಭಾರತಜನಾಭಿಪ್ರಾಯಕ್ಕೆ ಅನುಸಾರವಾಗಿ ಸ್ವರಾಜ್ಯಕೊಡುವ ಮಾರ್ಗ, ಉಪಾಯಗಳನ್ನು ರಚಿಸುವಂತೆ ಸರಕಾರವನ್ನು ಒತ್ತಾಯ ಮಾಡಬಲ್ಲಿರಿ.

ಪ್ರತಿಯೊಬ್ಬ ಭಾರತೀಯನೂ ನಿಮ್ಮ ಅಣ್ಣ ತಮ್ಮ, ನಿಮಗೆ ಸಮ ಎಂಬ ಭಾವನೆ ನಿಮಗಿಲ್ಲದಿದ್ದರೆ ಇದಾವುದನ್ನೂ ನೀವು ಮಾಡಲಾರಿರಿ. ನಿಮ್ಮಿಂದ ನಾನು ಭಿಕ್ಷೆಬೇಡುತ್ತಿಲ್ಲ. ಈಗ ಭೀಕರ ಸಮಸ್ಯೆಗೆ ಗೌರವಪೂರ್ಣವಾದ ಪರಿಹಾರವನ್ನು ಗೆಳೆಯನಂತೆ ತೋರಿಸಿಕೊಡುತ್ತಿದ್ದೇನೆ; ಅಷ್ಟೆ. ಇನ್ನೊಂದು ಉಪಾಯ—ದಮನ, ನಿಮಗೆ ಗೊತ್ತೇ ಇದೆ. ಅದು ನಿಷ್ಫಲವೆಂದು ಭವಿಷ್ಯ ನುಡಿಯುತ್ತೇನೆ. ದಮನ ಆಗಲೇ ಮೊದಲಾಗಿದೆ. ಪಾಣಿಪತ್ತಿನ ಇಬ್ಬರು ಧೀರರನ್ನಾಗಲೇ ತಮ್ಮ ಅಭಿಪ್ರಾಯಗಳನ್ನು ನಿರ್ಭಯದಿಂದ ಹೇಳಿದ್ದಕ್ಕೆ ಸರಕಾರ ಬಂಧಿಸಿದೆ. ಅದೇ ಕಾರಣಕ್ಕೆ ಲಾಹೋರಿನಲ್ಲಿ ಒಬ್ಬನ

ವಿಚಾರಣೆ ನಡೆಯುತ್ತಿದೆ. ಅಯೋಧ್ಯಾ ಜಿಲ್ಹೆಯಲ್ಲೊಬ್ಬ ಸೆರೆಯಲ್ಲಿದ್ದಾನೆ. ಮತ್ತೊಬ್ಬ ತೀರ್ಪನ್ನು ಇದಿರು ನೋಡುತ್ತಿದ್ದಾನೆ. ನಿಮ್ಮ ನಡುವೆ ಏನು ನಡೆಯುತ್ತಿದೆಯೋ ಅರಿತುಕೊಳ್ಳಬೇಕು. ದಮನ ಬರಲಿದೆಯೆಂದು ತಿಳಿದೂ ನಮ್ಮ ಪ್ರಚಾರವನ್ನು ಸಾಗಿಸುತ್ತಿದ್ದೇವೆ. ಭಾರತದ ಉಪ್ಪು ತಿನ್ನುತ್ತಿದ್ದೀರಿ. ಅದರ ಮಕ್ಕಳ ಪರವಾಗಿ ಇಲ್ಲಿ, ನಿಂತು ಉತ್ತಮ ಮಾರ್ಗ ಹಿಡಿಯಿರೆಂದು ಗೌರವ ಪೂರ್ವಕವಾಗಿ ಕೇಳಿಕೊಳ್ಳುತ್ತೇನೆ. ಭಾರತೀಯರ ಆಸೆಯನ್ನು ಭಗ್ನಗೊಳಿಸಲು ಯತ್ನಿಸುವುದು ದೇಶಕ್ಕೆ ದ್ರೋಹವೆಸಗಿದಂತೆ.

ನಿಮ್ಮ ಗೆಳೆಯ,
ಮೋ. ಕ. ಗಾಂಧಿ

## ೨

ಗೆಳೆಯ,

ಎರಡನೆಬಾರಿ ನಿನ್ನನ್ನು ಸಂಬೋಧಿಸುತ್ತಿದ್ದೇನೆ. ನಿಮ್ಮಲ್ಲನೇಕರಿಗೆ ಅಸಹಕಾರವೆಂದರೆ ಅಸಹ್ಯ; ನಾ ಬಲ್ಲೆ. ನಾನು ಪ್ರಾಮಾಣಿಕ ಎಂದು ನೀವು ಒಪ್ಪುವುದಾದರೆ ನನ್ನ ಕಾರ್ಯಕಲಾಪವಲ್ಲಿ ಎರಡನ್ನೂ ಮಾತ್ರ ಬೇರ್ಪಡಿಸಿ ನೋಡಿ ಎಂದು ಬಯಸುತ್ತೇನೆ.

ನಿಮಗೆ ನಾನು ಪ್ರಾಮಾಣಿಕ ಅನಿಸದಿದ್ದರೆ ನಾನದನ್ನು ದೃಢಪಡಿಸ ಲಾರೆ. ಇಂಗ್ಲೀಷರು ತಂದಿಟ್ಟ ಪದ್ಧತಿಯನ್ನು ದ್ವೇಷಿಸಿ, ಇಂಗ್ಲಿಷರನ್ನು ದ್ವೇಷಿಸಬೇಡಿ ಎಂದು ನಾ ಹೇಳಿದರೆ ಇದು ಬರೀ ಬೂಟಾಟಿಕೆ ಎಂದು ನಮ್ಮ ವರೇ ಕೆಲವರು ನನ್ನನ್ನು ನಿಂದಿಸುತ್ತಾರೆ. ತಮ್ಮನೊಬ್ಬ ದುಷ್ಟತನ ಮಾಡಿ ದರೆ ಅದನ್ನು ತಿರಸ್ಕರಿಸಬಹುದು. ಅವನನ್ನು ದ್ವೇಷಿಸಬೇಕಾಗಿಲ್ಲ ಎಂಬು ದನ್ನು ಅವರಿಗೆ ತಿಳಿಸಿಕೊಡಲು ಯತ್ನಿಸುತ್ತಿದ್ದೇನೆ. ಯೇಸು ಫರಿಸಾಂಯರ

ವಿದ್ಯಾವಂತರ ದುಷ್ಟತನವನ್ನು ತೆಗಳಿದ. ಅವರನ್ನು ದ್ವೇಷಿಸಲಿಲ್ಲ. ದುರ್ಗುಣ ವನ್ನು ದ್ವೇಷಿಸಿ, ಆ ಮನುಷ್ಯನನ್ನು ಪ್ರೀತಿಸಿ ಎಂದು ಯೇಸು ತೋರಿಸಿದ ದಿವ್ಯ ಮಾರ್ಗ ಕೇವಲ ಯೇಸುವಿಗಾಗಿ ಅಲ್ಲ, ಲೋಕವೆಲ್ಲ ಹಾಗೆ ನಡೆಯಲಿಕ್ಕೆ. ಲೋಕದ ಸಮಸ್ತ ಧರ್ಮ-ಗ್ರಂಥಗಳಲ್ಲೂ ಇದೇ ಉಪದೇಶವಿದೆ.

ನಾನು ಮಾನವ ಪ್ರಕೃತಿಯನ್ನು ಚೆನ್ನಾಗಿ ಬಲ್ಲೆ. ನನ್ನ ಲೋಪ ದೋಷಗಳನ್ನು ನಾನೇ ವಿಮರ್ಶಿಸಿಕೊಳ್ಳಬಲ್ಲೆ—ಮನುಷ್ಯ ತಾ ಮಾಡಿದ ಸಿದ್ಧಾಂತಕ್ಕಿಂತ ಉತ್ತಮ ಜೀವಿಯೆಂದು ನಾನು ಅರಿತಿದ್ದೇನೆ. ಆದ್ದರಿಂದ ನೀವೆಲ್ಲಾ ಒಟ್ಟಾಗಿ ಸೇರಿ ರಚಿಸಿದ ಪದ್ಧತಿಗಿಂತ ವ್ಯಕ್ತಿಶಃ ನೀವು ಎಷ್ಟೋ ಉತ್ತಮರೆಂದು ನಾ ಭಾವಿಸುತ್ತೇನೆ. ದುರದೃಷ್ಟಕರವಾದ ಆ ಎಪ್ರಿಲ್ ೧೦ ದಿನ ಅಮೃತಸರದಲ್ಲಿ ಕೂಡಿದ್ದ ಆ ಗುಂಪಿನಲ್ಲಿದ್ದ ನನ್ನ ದೇಶಬಾಂಧವರು ಪ್ರತಿಯೊಬ್ಬರೂ ಆ ಗುಂಪಿಗಿಂತ ಉತ್ತಮರು. ವ್ಯಕ್ತಿಶಃ ಯಾರೂ ಆ ನಿಷ್ಪಾಪಿ ಇಂಗ್ಲೀಷು ಬ್ಯಾಂಕಿನಧಿಕಾರಿಗಳನ್ನು ಕೊಲ್ಲಲು ಒಪ್ಪುತ್ತಿರಲಿಲ್ಲ. ಆ ಗುಂಪಿ ನಲ್ಲಿ ಅನೇಕ ಜನ ಮೈ ಮರೆತರು. ಹಾಗೆಯೇ ಕಚೇರಿಯೊಳಗಿನ ಇಂಗ್ಲೀಷರವನೇ ಬೇರೆ, ಹೊರಗಡೆ ಇಂಗ್ಲೀಷರವನೇ ಬೇರೆ. ಅದೇ ರೀತಿ ಇಂಗ್ಲಂಡಿನಲ್ಲಿರುವಾಗಲೇ ಬೇರೆ, ಹಿಂದುಸ್ಥಾನದಲ್ಲಿರುವಾಗಲೇ ಬೇರೆ. ಇಲ್ಲಿದ್ದಾಗ, ಅನರ್ಹನೀಯ ದುಷ್ಟ ವ್ಯವಸ್ಥೆಗೆ ನೀವು ಭಾಗಿಗಳು. ಆದ್ದರಿಂದ ನೀವು ಕೆಟ್ಟವರು ಎಂದು ತಿಳಿಯದೆ, ಪ್ರತಿಯೊಬ್ಬ ಇಂಗ್ಲೀ ಷನೂ ದುರುದ್ದೇಶಪೂರಿತನೆಂದು ಭಾವಿಸದೆ, ನಿಮ್ಮ ಈ ವ್ಯವಸ್ಥೆ ಯನ್ನು ತೀವ್ರವಾಗಿ ಕಟು ಶಬ್ದಗಳಿಂದ ಖಂಡಿಸಲು ಸಾಧ್ಯ. ಈ ವ್ಯವ ಸ್ಥೆಗೆ ನಾವು ಎಷ್ಟು ಮಟ್ಟಿಗೆ ದಾಸರೋ ನೀವೂ ಅಷ್ಟೇ ಮಟ್ಟಿಗೆ ದಾಸರು. ಅಂತೇ ಈ ಬರಹದಲ್ಲಿ ಕಾಣದ ಉದ್ದೇಶಗಳನ್ನು ಕಲ್ಪಿಸಿಕೊಳ್ಳಬೇಡಿ. ಮಾರು ಗೊಡುವ ಪ್ರಯತ್ನಮಾಡಿ ನನ್ನ ಮನಸ್ಸಿನ ಉದ್ದೇಶವನ್ನೆಲ್ಲ ಹೇಳಿಯೇಬಿಡು ತ್ತೇನೆ. ಒಂದು ಹಿಡಿಜನಕ್ಕೆ ನಿಮಗೆ ಹಿಂದುಸ್ಥಾನವನ್ನು ಆಧೀನವಾಗಿರಿಸುವ ಈ ವ್ಯವಸ್ಥೆಯನ್ನು ಸುಧಾರಿಸಬೇಕು ಇಲ್ಲವೆ ಸಂಹರಿಸಬೇಕೆಂಬ ಆತುರ ನನಗೆ. ಹಿಂದುಸ್ಥಾನದಲ್ಲಿ ಎತ್ತಲೂ ಕಣ್ಣಿಗೆ ಚುಚ್ಚುವ ಪಿರಂಗಿಗಳ ಕೋಟೆ ಗಳ ಆಸರೆಯಲ್ಲಿ ಮಾತ್ರವೇ ಇಂಗ್ಲೀಷರು ಕ್ಷೇಮವಾಗಿರಬಲ್ಲ ಈ ವ್ಯವಸ್ಥೆ ಯನ್ನು ತಿದ್ದಬೇಕು ಇಲ್ಲವೆ ತೊಡೆಯಬೇಕು. ಇದು ನಿಮಗೂ ತರವಲ್ಲ. ನಮಗೂ ತರವಲ್ಲ. ನಮ್ಮ ಸಂಘಜೀವನ ಪರಸ್ಪರ ಅವಿಶ್ವಾಸ, ಭಯಗಳ

ಮೇಲೆ ಕಾಲೂರಿನಿಂತಿದೆ. ಇದು ಕಾಪುರುಷತನವಲ್ಲವೆ? ನೀವೂ ಒಪ್ಪುತ್ತೀರಿ. ಇಂಥ ಪರಿಸ್ಥಿತಿಯನ್ನು ತಂದೊಡ್ಡಿದ ವ್ಯವಸ್ಥೆ ಪೈಶಾಚೀ ವ್ಯವಸ್ಥೆಯಾಗಿರಲೇಬೇಕು. ನೀವು ಹಿಂದುಸ್ಥಾನದಲ್ಲಿ ಸ್ವಜನರಂತೆ ಬಾಳುವ ಹಾಗಿರಬೇಕು; ಎಲ್ಲ ಕಾಲಕ್ಕೂ ಪರಕೀಯ ಸುಲಿಗೆಗಾರರಂತೆ ಇರಲಾಗದು. ಒಬ್ಬ ಇಂಗ್ಲೀಷನ ಪ್ರಾಣಕ್ಕೆ ಒಂದು ಸಾವಿರ ಭಾರತೀಯರ ಪ್ರಾಣ ಎಂಬುದು ನಿರಾಶೆಯ ಅಂಧಕಾರದ ಸೂತ್ರ. ಆದರೂ ಈ ದೇಶದ ಉನ್ನತೋನ್ನತ ಅಧಿಕಾರಿಗಳು ೧೯೧೯ ರಲ್ಲಿ ಉಪದೇಶಿಸಿದ್ದು ಅದನ್ನೇ.

ನಮ್ಮನ್ನೂ ನಿಮ್ಮನ್ನೂ ಒಟ್ಟಿಗೆ ಅಧೋಗತಿಗೆ ಎಳೆದಿರುವ ಈ ವ್ಯವಸ್ಥೆಯನ್ನು ನಾಶಗೊಳಿಸಲು ನನ್ನ ಜೊತೆಗೆ ಬನ್ನಿ ಎಂದು ನಿಮ್ಮನ್ನೂ ಕರೆಯಲೆನಿಸುತ್ತದೆ. ಅದಕ್ಕೆ ಕಾಲವಿನ್ನೂ ಪಕ್ವವಾಗಿಲ್ಲ. ಅದಕ್ಕೆ ಬೇಕಾಗುವಷ್ಟು ಸ್ವಾರ್ಥತ್ಯಾಗ, ಆತ್ಮನಿಗ್ರಹ ಆತ್ಮೋತ್ಸಾಹಗಳಿನ್ನೂ ಕಂಡಿಲ್ಲ. ಆದರೆ ನಮ್ಮ ಪರದೇಶ ವಸ್ತ್ರ ಬಹಿಷ್ಕಾರದಲ್ಲೂ ಪಾನನಿರೋಧ ಚಳುವಳಿಯಲ್ಲೂ ನೀವು ನೆರವಾಗಿರೆಂದು ಬೇಡುತ್ತೇನೆ.

ಇಂಗ್ಲೀಷ ಇತಿಹಾಸಕಾರರೇ ತೋರಿಸಿದ್ದಾರೆ—ಲಂಕಾಷೈರಿನ ಬಟ್ಟೆಯನ್ನು ಹಿಂದುಸ್ಥಾನದ ತಲೆಯ ಮೇಲೆ ಬಲವಂತವಾಗಿ ಹೊರಿಸಿ ಇಲ್ಲಿದ್ದ ಜಗತ್ಪ್ರಸಿದ್ಧ ವಸ್ತುಗಳನ್ನು ಮನವಾರೆ ಕೈಯ್ಯಾರೆ ಹಾಳುಮಾಡಿದರು. ಅವರಿಂದ ಹಿಂದುಸ್ಥಾನ ಲಂಕಾಷೈರ್, ಜಪಾನ, ಫ್ರಾನ್ಸ, ಅಮೇರಿಕಾ ಎಲ್ಲವನ್ನೂ ಮೊರೆಹೋಗಬೇಕು. ಇದರಿಂದ ಹಿಂದುಸ್ಥಾನದ ಗತಿಯೇನಾಯಿತೋ ನೋಡಿ. ಪ್ರತಿವರ್ಷವೂ ಬಟ್ಟೆಗಾಗಿ ೬೦ ಕೋಟಿ ರೂಪಾಯನ್ನು ಪರದೇಶಗಳಿಗೆ ತೆರುತ್ತಿದ್ದೇವೆ. ನಮ್ಮ ಬಟ್ಟೆಗೆ ಸಾಕಾಗುವಷ್ಟು ಹತ್ತಿಯನ್ನು ನಾವು ಬೆಳೆಯುತ್ತೇವೆ. ಇಲ್ಲಿಂದ ಹತ್ತಿಯನ್ನು ಹೊರಗಡೆ ಕಳಿಸಿ, ಅಲ್ಲಿ ಬಟ್ಟೆ ನೇಯಿಸಿ ತರಿಸಿಕೊಳ್ಳುವುದು ಮೂರ್ಖತನವಲ್ಲದೆ ಮತ್ತೇನು? ಹಿಂದುಸ್ಥಾನವನ್ನು ಇಷ್ಟು ನಿಸ್ಸಹಾಯ ಸ್ಥಿತಿಗೆ ನೂಕಿದ್ದು ಸರಿಯೆ?

೧೫೦ ವರ್ಷದ ಹಿಂದೆ ನಮ್ಮ ಬಟ್ಟೆಯನ್ನೆಲ್ಲ ನಾವೇ ಮಾಡಿಕೊಳ್ಳುತ್ತಿದ್ದೆವು. ತಮ್ಮ ತಮ್ಮ ಗುಡಿಸಿಲುಗಳಲ್ಲಿ ಕೂತೇ ನಮ್ಮ ಹೆಂಗಸರು ಸೊಗಸಾದ ನೂಲು ನೂತು ತಮ್ಮ ಗಂಡಂದಿರ ಸಂಪಾದನೆಗೆ ಜೊತೆಗೂಡಿಸುತ್ತಿದ್ದರು. ಹಳ್ಳಿಯ ನೇಕಾರರು ಆ ನೂಲನ್ನು ನೇಯುತ್ತಿದ್ದರು. ನಮ್ಮ

ದೇಶದಂಥ ವಿಶಾಲವಾದ ಕರ್ಷಕದೇಶದಲ್ಲಿ ಅದು ಅತ್ಯಾಜ್ಯವಾದ ಅತ್ಯಗತ್ಯ ಆರ್ಥಿಕವಿಧಾನ. ನಮ್ಮ ಬಿಡುವನ್ನು ಸ್ವಾಭಾವಿಕವಾದ ರೀತಿಯಲ್ಲಿ ಉಪಯೋಗಿಸಲು ಅದು ಉತ್ತಮ ವ್ಯವಸ್ಥೆ. ಇವೊತ್ತು ನಮ್ಮ ಹೆಂಗಸರಿಗೆ ಆ ಕೈ ಚಳಕ ಹೋಗಿದೆ. ಕೋಟ್ಯಾಂತರ ಜನರ ಮೇಲೆ ನಿರುದ್ಯೋಗ ಬಂದುಬಿದ್ದು ದೇಶ ಬಡವಾಗಿದೆ. ನೇಕಾರರು ಅನೇಕರು ಭಂಗಿಗಳಾಗಿದ್ದಾರೆ. ಕೆಲವರು ಬಾಡಿಗೆ ಸಿಪಾಯಿಗಳಾಗಿದ್ದಾರೆ. ಆ ಕುಶಲ ವಸ್ತ್ರಕಾರರ ಕುಲ ಅರ್ಧಕ್ಕರ್ಧ ನಷ್ಟವಾಗಿದೆ. ಉಳಿದರ್ಧ ಸಯವಾದ ಕೈ ನೂಲು ಇಲ್ಲದ್ದಕ್ಕೆ ಪರದೇಶಿ ನೂಲನ್ನು ತರಿಸುತ್ತಿದ್ದಾರೆ.

ಹಿಂದುಸ್ಥಾನಕ್ಕೆ ಪರದೇಶ ವಸ್ತ್ರ ಬಹಿಷ್ಕಾರ ಎಂದರೆ ಏನೋ ನಿಮಗೀಗ ಅರ್ಥವಾಗಿರಬೇಕು. ಶಿಕ್ಷಾರ್ಥವಾಗಿ ಅದನ್ನು ಹೂಡಿಲ್ಲ. ಖಿಲಾಫತ್–ಪಂಜಾಬುಗಳ ಅನ್ಯಾಯವನ್ನು ಸರಕಾರ ಪರಿಹರಿಸಿದರೂ ಈ ಬಹಿಷ್ಕಾರ ಚಳುವಳಿ ಸಾಗುತ್ತದೆ. ಹಿಂದುಸ್ಥಾನಕ್ಕೆ ಈಗಲೇ ಸ್ವರಾಜ್ಯ ಕೊಡುತ್ತೇವೆ ಎಂದರೂ ಅಷ್ಟೆ. ಸ್ವರಾಜ್ಯ ಎಂದರೆ ನಮ್ಮ ರಾಷ್ಟ್ರದ ಆರ್ಥಿಕ ಅಸ್ತಿತ್ವಕ್ಕೆ ಅತ್ಯಗತ್ಯವಾದ ಭಾರತೀಯ ಉದ್ಯೋಗಗಳನ್ನು ಕಾಪಾಡಿಕೊಳ್ಳುವ ಶಕ್ತಿ: ಅದಕ್ಕೆ ವಿರುದ್ಧವಾದ ವಸ್ತುಗಳ ಪ್ರವೇಶಕ್ಕೆ ಅಡ್ಡಿಮಾಡುವ ಶಕ್ತಿ—ಇಷ್ಟಾದರೂ ಆಗಬೇಕು. ವ್ಯವಸಾಯ, ನೂಲುಗಾರಿಕೆ ಎರಡೂ ರಾಷ್ಟ್ರದ ಎರಡು ಶ್ವಾಸಕೋಶ. ಅವಕ್ಕೆ ಕ್ಷಯಬಾರದಂತೆ ಏನೇ ಆಗಲಿ, ಕಾಪಾಡಬೇಕು.

ಈ ಕೆಲಸ ಯಾವುದಕ್ಕಾಗಿಯೂ ತಡೆದು ನಿಲ್ಲುವಂತಿಲ್ಲ. ಇಡೀ ರಾಷ್ಟ್ರವೇ ತನ್ನ ಬೇಸಾಯಕ್ಕೆ ಜೊತೆಯಾಗಿ ಒಂದು ಉದ್ಯೋಗ (ಧನದಾಯಕವಾದ್ದು) ಇಲ್ಲದೆ ಸೊರಗಿಹೋಗಿರುವಾಗ ಪರದೇಶದ ಗಿರಣಿಗಾರರ, ಸ್ವದೇಶದ ಆಮದುವ್ಯಾಪಾರಿಗಳ ಹಿತವನ್ನು ಯೋಚಿಸಲಾದೀತೆ ?

ಇದು ಪರದೇಶದ ಎಲ್ಲಾ ವಸ್ತುಗಳ ಬಹಿಷ್ಕಾರವಲ್ಲ. ತಪ್ಪು ತಿಳಿದುಕೊಳ್ಳಬೇಡಿ. ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಬೇಲಿಹಾಕಬೇಕೆಂದು ಹಿಂದುಸ್ಥಾನದ ಉದ್ದೇಶವಲ್ಲ. ಹೊರಗಡೆ ಚೆನ್ನಾಗಿ ಮಾಡುವ ಬೇರೆ ಪದಾರ್ಥಗಳನ್ನು, ಬಟ್ಟೆಯೊಂದನ್ನು ಬಿಟ್ಟು, ಉಭಯಾನುಕೂಲವಾದ ರೀತಿಯಲ್ಲಿ ಹಿಂದುಸ್ಥಾನ ಕೃತಜ್ಞತಾಪೂರ್ವಕವಾಗಿ ಸ್ವೀಕರಿಸೀತು. ಯಾವುದನ್ನೂ ಬಲವಂತವಾಗಿ ಅದರ ಮೇಲೆ ಹೇರಲಾಗದು. ಭವಿಷ್ಯದ ಮಾತನ್ನು ಈಗೇಕೆ

ಇಣಿಕಿ ನೋಡಲಿ? ಬೇಗನೇ ಹಿಂದುಸ್ಥಾನ ಇಂಗ್ಲೆಂಡಿನೊಂದಿಗೆ ಸರಿಸಮನಾಗಿ ಸಹಕರಿಸೀತು ಎಂದು ಆಶಿಸುತ್ತೇನೆ. ಆಗ ವ್ಯಾಪಾರದ ಅಂಶಗಳನ್ನು ಪರಿಶೀಲಿಸಬಹುದು. ಸದ್ಯ, ಪರದೇಶ ವಸ್ತ್ರ ಬಹಿಷ್ಕಾರದಲ್ಲಿ ನಿಮ್ಮ ನೆರವು ಬೇಡುತ್ತೇನೆ.

ಇಷ್ಟೇ ಮಹತ್ವದ್ದು ಇದೇ ತರದ್ದು ಪಾನನಿರೋಧ ಚಳುವಳಿ. ಹೆಂಡ ಅಂಗಡಿ ಸಮಾಜದ ತಲೆಯ ಮೇಲೆ ಹೊರಿಸಿದ ಶಾಪ. ಈ ವಿಷಯದಲ್ಲಿ ಈಗಿರುವಷ್ಟು ಜಾಗೃತಿ ಹಿಂದೆಂದೂ ಇರಲಿಲ್ಲ. ಇದರಲ್ಲಿ ನಿಮಗಿಂತ ಹೆಚ್ಚಾಗಿ ಭಾರತೀಯ ಮಂತ್ರಿಗಳೇ ನೆರವು ನೀಡಬಲ್ಲರು; ನನಗೆ ಗೊತ್ತು. ಆದರೆ ಈ ವಿಷಯವಾಗಿ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿಬಿಡಿ ಎನುತ್ತೇನೆ. ಯಾವ ಬಗೆಯ ಸರಕಾರವೇ ಬರಲಿ, ನನಗೆ ತಿಳಿದ ಮಟ್ಟಿಗೆ, ಸಂಪೂರ್ಣ ಪಾನನಿರೋಧವನ್ನೇ ಒತ್ತಾಯವಾಗಿ ಬೇಡಿತು ರಾಷ್ಟ್ರ. ಪ್ರವರ್ಧಮಾನವಾದ ಈ ಚಳುವಳಿಗೆ ನಿಮ್ಮ ಶಕ್ತಿ ಪ್ರಭಾವಗಳನ್ನೂ ಧಾರೆಯೆರೆದು ರಾಷ್ಟ್ರದಪರ ನಿಂತು ಅದನ್ನು ಬೆಳಿಸಿ.

ನಿಮ್ಮ ಗೆಳೆಯ,
ಮೋ. ಕ. ಗಾಂಧಿ

# ಬಾರ್ಡೋಲಿಯ ರಣ-ಕಹಳೆ

[ ಅಹಮ್ಮದಾಬಾದ ಕಾಂಗ್ರೆಸ್ಸಿನಲ್ಲಿ ಕಾಯಿದೆಭಂಗವು ನಿಶ್ಚಯಿಸಲ್ಪಟ್ಟು ಮಹಾತ್ಮರು ಅದರ ಸರ್ವಾಧಿಕಾರಿಗಳಾಗಿ ನಿಯಮಿಸಲ್ಪಟ್ಟರು. ಬಾರ್ಡೋಲಿಯಲ್ಲಿ ಕರನಿರಾಕರಣೆಯ ಸಿದ್ಧತೆ ನಡೆಯಿತು. ಮುಂಬಯಿಯಲ್ಲಿಯ ಸರ್ವ ಪಕ್ಷೀಯ ಪರಿಷತ್ತು ಸರಕಾರ ಹಾಗು ಕಾಂಗ್ರೆಸ್ಸಿನಲ್ಲಿ ಒಡಂಬಡಿಕೆ ಮಾಡಲು ಪ್ರಯತ್ನಿಸಿ ವಿಫಲವಾದ ನಂತರ ಮಹಾತ್ಮರು ಕಾಯಿದೆಭಂಗದ ರಣಕಹಳೆಯ ಓಲೆಯನ್ನು ವೈಯಿಸರಾಯರಿಗೆ ಬರೆದರು. ]

ಬಾರ್ಡೋಲಿ

೧ನೇ ಫೆಬ್ರುವರಿ ೧೯೨೨

ಮಹಾಶಯರೇ !

ಬಾರ್ಡೋಲಿಯು ಮುಂಬಯಿ ಇಲಾಖೆಯ ಸುರತ ಜಿಲ್ಹೆಯಲ್ಲಿಯ ಒಂದು ಚಿಕ್ಕ ತಾಲೂಕು. ಈ ತಾಲೂಕಿನ ಜನಸಂಖ್ಯೆಯು ೮೭೦೦೦ ಇದೆ.

ಹೋದ ೨೯ನೇ ತಾರೀಖಿನ ದಿವಸ ಶ್ರೀ. ವಿಠ್ಠಲಭಾಯಿ ಪಟೇಲರ ಅಧ್ಯಕ್ಷತೆಯಲ್ಲಿ ಈ ತಾಲೂಕಿನ ರೈತರ ಸಭೆ ಜರುಗಿ ಕಾಯಿದೆಭಂಗದ ಚಳುವಳಿಯನ್ನು ಹೂಡುವ ನಿಶ್ಚಯಮಾಡಿದೆ. ದಿಲ್ಲಿಯಲ್ಲಿ ನೆರೆದ ಅ. ಭಾ. ಕಾಂಗ್ರೆಸ ಕಮೀಟಿಯು ಕಾಯಿದೆಭಂಗಕ್ಕಾಗಿ ಹಾಕಿದ ಕರಾರುಗಳನ್ನೆಲ್ಲ ಪೂರೈಸಿ, ತನ್ನ ಅರ್ಹತೆಯನ್ನು ಸಿದ್ಧಮಾಡಿದೆ. ಆದರೆ ಈ ಗೊತ್ತುವಳಿಗೆ ಮುಖ್ಯ ಕಾರಣನು ನಾನೇ ಇರುವದರಿಂದ ಈ ನಿರ್ಣಯವು ಯಾವ ಪರಿಸ್ಥಿತಿಯಲ್ಲಿ ಸ್ವೀಕರಿಸಲ್ಪಟ್ಟಿತು ಎಂಬುದನ್ನು ತಮಗೂ ಜನತೆಗೂ ತಿಳಿಸುವುದು ನನ್ನ ಕರ್ತವ್ಯವೆಂದು ನಾನು ಭಾವಿಸಿದ್ದೇನೆ. ಖಿಲಾಫತ್, ಪಂಜಾಬ, ಸ್ವರಾಜ್ಯಗಳ ವಿಷಯವಾಗಿ ಭಾರತವು ಕೈಕೊಂಡ ನಿರ್ಣಯವನ್ನು ಸರಕಾರವು ಮನ್ನಿಸದೆ ಯಾವಾಗಲೂ ನಿರಾಕರಿಸುತ್ತ ಬಂದಿದೆ. ಆದುದರಿಂದ ಅದರ ವಿರುದ್ಧವಾಗಿ, ರಾಷ್ಟ್ರೀಯ ಬಂಡಿನ ಭಾವನೆಯನ್ನು ವ್ಯಕ್ತಪಡಿಸಲೋಸುಗ ಸಾಮುದಾಯಿಕ ಕಾಯಿದೆಭಂಗವನ್ನು ಕೈಕೊಳ್ಳಬೇಕೆಂದೂ ಬಾರ್ಡೋಲಿಯು

ಅದರ ಮೊದಲನೇ ಕೇಂದ್ರವಾಗಬೇಕೆಂದೂ ದಿಲ್ಲಿಯ ಅ. ಭಾ. ಕಾಂ. ಕಮಿಟಿಯು ಸಾರಿತ್ತು. ಆದರೆ ದುರ್ದೈವದಿಂದ ೧೭ನೇ ನವ್ಹಂಬರಕ್ಕೆ ಮುಂಬಯಿಯಲ್ಲಿ ದಂಗೆ ಸಂಭವಿಸಿದ್ದರಿಂದ ಬಾರ್ಡೋಲಿಯಲ್ಲಿ ಹೂಡಲು ಯೋಚಿಸಿದ ಚಳುವಳಿಯನ್ನು ತಡೆಹಿಡಿಯಬೇಕಾಯಿತು. ಇದೇ ಸಮಯಕ್ಕೆ ದಿಲ್ಲಿ, ಪಂಜಾಬ, ಸಂಯುಕ್ತಪ್ರಾಂತ, ಆಸಾಮ, ಬಂಗಾಲ, ಒಂದು ದೃಷ್ಟಿಯಿಂದ ಬಿಹಾರ, ಓರಿಸಾ, ಹಾಗು ಉಳಿದ ಭಾಗಗಳಲ್ಲಿಯೂ, ಅತ್ಯಾಚಾರ ಸ್ವರೂಪದ ದಬ್ಬಾಳಿಕೆಯು ನಡೆಯಿಸಲ್ಪಟ್ಟಿತು. ಇದಕ್ಕೆ ಭಾರತ ಸರಕಾರದ ಒಪ್ಪಿಗೆಯೂ ಇದ್ದಿತು. ಈ ಎಲ್ಲ ಪ್ರಾಂತಗಳಲ್ಲಿ ಅಧಿಕಾರಿಗಳು ಎಸಗಿದ ಕೃತ್ಯಗಳಿಗೆ "ದಬ್ಬಾಳಿಕೆ" ಎಂದೆನ್ನಲು ತಾವು ಆಕ್ಷೇಪವನ್ನೆತ್ತಿರುವಿರೆಂಬುದನ್ನು ನಾನು ಬಲ್ಲೆ. ಪರಿಸ್ಥಿತಿಯನ್ನು ಹಿಡಿತದಲ್ಲಿಡಲು ಆವಶ್ಯಕತೆಗಿಂತ ಅತಿರೇಕವಾದ ಉಪಾಯಗಳನ್ನು ಕೈಕೊಂಡರೆ, ಅವು ನಿಸ್ಸಂಶಯವಾಗಿ ದಬ್ಬಾಳಿಕೆಯಲ್ಲದೆ ಮತ್ತೇನು ? ಜನರ ಆಸ್ತಿಯನ್ನು ಲೂಟಿಮಾಡುವುದು, ನಿರಪರಾಧಿ ಜನರ ಮೇಲೆ ಹಲ್ಲೆ ಮಾಡುವುದು, ಸೆರೆಯಲ್ಲಿರುವ ಕೈದಿಗಳಿಗೆ ಫಟಕೀ ಹೊಡೆಯುವುದು, ಮತ್ತು ಅಮಾನುಷ ರೀತಿಯಿಂದ ಅವರನ್ನು ಛಲಿಸುವದು, ಇವೇ ಮೊದಲಾದ ಕೃತ್ಯಗಳು ಶಿಷ್ಟಸಮ್ಮತವೂ ಕಾಯದೇಬದ್ಧವೂ ಆವಶ್ಯಕವೂ ಎಂದು ಯಾರೂ ಅನ್ನಲಾರರು. ಅಧಿಕಾರಿ ವರ್ಗದ ಕಾಯದೇ ವಿರುದ್ಧವಾದ ಈ ಕೃತ್ಯಗಳಿಗೆ ಕಾಯದೆ ವಿರುದ್ಧವಾದ ದಬ್ಬಾಳಿಕೆಯನ್ನದೆ ಏನೆನ್ನಬೇಕು ?

ಸರ್ಪಗಾವಲು (ಪಿಕೆಟಿಂಗ) ಹಾಗು ಹರತಾಳಗಳ ವಿಷಯದಲ್ಲಿ ಅಸಹಕಾರವಾದಿಗಳು ಅಥವಾ ಅದಕ್ಕೆ ಸಹಾನುಭೂತಿಯಿದ್ದವರು ಬೆದರಿಕೆ ಹಾಕಿದರೆಂದೂ ಒಪ್ಪೋಣ. ಇಷ್ಟರಿಂದಲೇ ಶಾಂತಿಯುಕ್ತವಾದ ಸ್ವಯಂ ಸೇವಕ ದಲಗಳ ಸಂಘಟನೆಯನ್ನು ಮಾಡುವದು ಹಾಗು ಸಾರ್ವಜನಿಕ ಸಭೆಗಳನ್ನು ಜರುಗಿಸುವದು ಇವೇ ಮೊದಲಾದ ಕಾರ್ಯಗಳನ್ನು ತಡೆದು ಸಾರ್ವತ್ರಿಕವಾಗಿ ದಬ್ಬಾಳಿಕೆಯನ್ನು ನಡೆಯಿಸುವದು ಎಂದೂ ಸಮರ್ಥನೀಯವಾಗಲಾರದು. ಇಂತಹ ಪ್ರಸಂಗಗಳಲ್ಲಿ ಅಧಿಕಾರಿ ವರ್ಗವು ವಿಶೇಷಾಧಿಕಾರದ ದುರುಪಯೋಗವನ್ನು ಮಾಡಿಕೊಂಡಿದೆ. ನಿಜವಾಗಿಯೂ ವಿಚಾರಮಾಡಿದರೆ, ಉದ್ದೇಶಪೂರ್ವಕವಾಗಿ, ಡಾಣಾಡಂಗುರವಾಗಿ ಮಾಡುವ ಅತ್ಯಾಚಾರದ ಕೃತಿಗಳನ್ನು ನಿಯಂತ್ರಣದಲ್ಲಿ ತರಲು ಈ ವಿಶೇಷಾಧಿಕಾರದ ಕಾಯಿದೆಗಳ ಪಾಸು

ಮಾಡಿತ್ತು. ಅದರಂತೆ ಸಾಮಾನ್ಯ ಕಾಯಿದೆಗಳನ್ನು ಕೂಡ ನಿರಪರಾಧಿ ಜನರ ಛಲನಕ್ಕೆ ಕಾಯಿದೆಯ ವಿರುದ್ಧವಾಗಿ ಉಪಯೋಗಿಸಿದ್ದು ಕಂಡು ಬಂದಿದೆ. ಯಾವ ಕಾಯಿದೆಯನ್ನು ಕಿತ್ತೊಗೆಯಲಾಗುವದೆಂದು ಅಭಿವಚನ ಕೊಡಲ್ಪಟ್ಟಿತ್ತೋ ಅದೇ ಕಾಯಿದೆಯ ಆಧಾರದಿಂದ ಮುದ್ರಣ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವಂಥ ಕೃತಿಗಳು ಮಾಡಲ್ಪಟ್ಟವು. ಈ ಎಲ್ಲ ಕೃತ್ಯಗಳಿಗೆ " ದಬ್ಬಾಳಿಕೆಯ ಹೊರ್ತು ಮತ್ತೊಂದು ಹೆಸರು ಕೊಡಲು ಶಕ್ಯವಿಲ್ಲ. ಮುದ್ರಣ ಸ್ವಾತಂತ್ರ್ಯ, ಸಭಾಸ್ವಾತಂತ್ರ್ಯ, ಭಾಷಣ ಸ್ವಾತಂತ್ರ್ಯಗಳು ನಾಶವಾಗುವ ಹೊತ್ತು ಬಂದಿದ್ದು, ಅವುಗಳನ್ನು ಉಳಿಸುವ ಮಹತ್ವದ ಮೊದಲನೆಯ ಕರ್ತವ್ಯವೇ ರಾಷ್ಟ್ರದ ಎದುರಿಗಿದೆ. ತಾವು ದುಂಡುಮೇಜಿನ ಪರಿಷತ್ತನ್ನು ಕೂಡಿಸಬೇಕೆಂಬುದೇ ಮಾಲವೀಯ ಪರಿಷತ್ತಿನ ಉದ್ದೇಶವಿದ್ದಿತು. ಆದರೆ ಸರಕಾರದ ಈಗಿನ ಮನಸ್ಥಿತಿಯನ್ನು ಲಕ್ಷಿಸಿಯೂ, ಮತ್ತು ಅತ್ಯಾಚಾರೀ ಚಳವಳಿಯನ್ನು ಪೂರ್ಣ ನಿಯಂತ್ರಿಸುವ ದೇಶದ ಸಿದ್ಧತೆಯೂ ದೇಶದಲ್ಲಿಲ್ಲ ವೆಂಬುದನ್ನರಿತು, ಅಸಹಕಾರವಾದಿಗಳು ಪರಿಷತ್ತಿನಲ್ಲಿ ಭಾಗವಹಿಸಲು ಬಯಸಲಿಲ್ಲ. ಆದರೆ ಸಂಕಟವನ್ನು ತಪ್ಪಿಸಲು ಬರುವಂತಿದ್ದರೆ ತಪ್ಪಲಿ ಎಂಬ ಭಾವನೆಯಿಂದ ಈ ಪರಿಷತ್ತಿನ ಸೂಚನೆಗಳಿಗೆ ಮಾನ್ಯತೆ ಕೊಡಲು ಕಾಂಗ್ರೆಸ ವರ್ಕಿಂಗ ಕಮೀಟಿಗೆ, ಸಂಕೋಚವಿಲ್ಲದೆ ಸಲಹೆಯಿತ್ತೆ.

ಕಲಕತ್ತೆಯ ತಮ್ಮ ಭಾಷಣದಿಂದ ತಮಗೆ ಏನು ಬೇಕಾಗಿದೆ ಎಂಬುದನ್ನು ನಾನು ಅರಿತಿದ್ದೆ. ಆ ಎಲ್ಲ ಕರಾರುಗಳನ್ನು ಪರಿಷತ್ತಿನ ಸೂಚನೆಗಳಲ್ಲಿ ಅಡಕ ಮಾಡಲಾಗಿತ್ತು. ಹೀಗಿದ್ದೂ ತಾವು ಅವಸರದಿಂದ ಅವುಗಳನ್ನು ನಿರಾಕರಿಸಿದಿರಿ.

ಮುದ್ರಣ ಸ್ವಾತಂತ್ರ್ಯ, ಸಭಾಸ್ವಾತಂತ್ರ್ಯ ಹಾಗು ಭಾಷಣ ಸ್ವಾತಂತ್ರ್ಯಗಳ ಈ ಜನ್ಮ ಸಿದ್ಧ ಹಕ್ಕುಗಳ ಬೇಡಿಕೆಯನ್ನು ಪೂರ್ಣಮಾಡಿಕೊಳ್ಳುವುದರ ದೆಸೆಯಿಂದ ಯಾವುದೊಂದು ಅಹಿಂಸಾಮಯ ಮಾರ್ಗವನ್ನು ಅವಲಂಬಿಸದೆ ರಾಷ್ಟ್ರಕ್ಕೆ ತರಣೋಪಾಯವಿಲ್ಲದಾಗಿದೆ. ಅಸಹಕಾರವಾದಿಗಳು ಮಾತಿನಲ್ಲಿಯೂ ಕೃತಿಯಲ್ಲಿಯೂ ಎಲ್ಲಿಯ ವರೆಗೆ ಅಹಿಂಸೆಯನ್ನು ಪಾಲಿಸುವರೋ ಅಲ್ಲಿಯ ವರೆಗೆ ಅವರ ಕಾರ್ಯದಲ್ಲಿ ಯಾವ ಬಗೆಯ ಅಡೆತಡೆಗಳನ್ನೂ ಉಂಟು ಮಾಡಲಾಗುವದಿಲ್ಲೆಂದು ಅಲಿ ಬಂಧುಗಳು ಕ್ಷಮೆಯನ್ನು ಕೇಳಿದಾಗ ತಾವು

ತಮ್ಮ ಧೋರಣವನ್ನು ಸಾರಿದ್ದೀರಿ. ಆದರೆ ಇತ್ತೀಚಿಗೆ ನಡೆದ ಘಟನೆಗಳನ್ನು ನೋಡಿದರೆ, ತಾವು ತಮ್ಮ ಧೋರಣೆಗೆ ತಿಲಾಂಜಲಿಯನ್ನು ಕೊಟ್ಟಂತೆ ನನಗನಿಸುತ್ತದೆ. ಒಂದು ವೇಳೆ ಸರಕಾರವು ತಟಸ್ಥ ಉಳಿದು, ಲೋಕಮತವು ಪರಿಪಕ್ವವಾಗಲು ಸರಕಾರವು ಅವಕಾಶವನ್ನು ಕೊಟ್ಟಿದ್ದರೆ, ನಮ್ಮ ಲಕ್ಷಾವಧಿ ದೇಶಬಾಂಧವರಲ್ಲಿ ಇದಕ್ಕಿಂತ ಹೆಚ್ಚು ಸಿಸ್ತನ್ನು ನಿರ್ಮಿಸಲು ಕಾಂಗ್ರೆಸ್ಸಿಗೆ ಶಕ್ಯವಿದ್ದಿತು. ಮತ್ತು ಅತ್ಯಾಚಾರ ಶಕ್ತಿಗಳನ್ನು ನಿಯಂತ್ರಿಸಲು ಅನುವು ದೊರೆಯುತ್ತಿತ್ತು. ಮತ್ತು ಅಲ್ಲಿಯ ವರೆಗೆ, ಕಾಯದೇಭಂಗವನ್ನು ತಡೆಹಿಡಿಯಲು ಸಲಹೆಯನ್ನು ಕೊಡಲೂ ಕಾಂಗ್ರೆಸ್ಸಿಗೆ ಶಕ್ಯವಿದ್ದಿತು. ಆದರೆ ದುರ್ದೈವದಿಂದ ದೇಶದ ಇತಿಹಾಸದಲ್ಲಿಯೇ ಎಂದೂ ಕಾಣದ ಕಾಯಿದೇ ವಿರುದ್ಧವಾದ ದಬ್ಬಾಳಿಕೆಯು ನಡೆದುದರಿಂದ ಕಾಯದೇಭಂಗವನ್ನು ಅವಲಂಬಿಸುವದೊಂದೇ ಕರ್ತವ್ಯವು ನಮಗೆ ಉಳಿದಿದೆ. ನಾನು ಕಾಲಕಾಲಕ್ಕೆ ಯಾವ ಕಾರ್ಯಕ್ಷೇತ್ರವನ್ನು ಗೊತ್ತು ಪಡಿಸುವೆನೋ ಅಷ್ಟರಮಟ್ಟಿಗೆ ಮಾತ್ರ ಈ ಚಳವಳಿಯು ಮರ್ಯಾದಿತವಾಗಿ ಉಳಿಯಬೇಕೆಂದು ವರ್ಕಿಂಗ ಕಮೀಟಿಯು ನಿಶ್ಚಯಿಸಿದೆ. ಸದ್ಯಕ್ಕೆ ಬಾರ್ಡೋಲಿಯನ್ನು ಈ ಕಾರ್ಯಕ್ಷೇತ್ರವನ್ನಾಗಿ ನಿಶ್ಚಿತಗೊಳಿಸಿದೆ. ಅಸ್ಪೃಶ್ಯತೆ, ಖಾದಿಹುಟ್ಟುವಳಿ, ಹಾಗು ಜಾತೀಯ ಐಕ್ಯ, ಅಹಿಂಸೆ ಮೊದಲಾದ ದಿಲ್ಲಿ ಗೊತ್ತುವಳಿಯ ಕರಾರುಗಳು ಪೂರೈಸಲ್ಪಟ್ಟರೆ, ಮದ್ರಾಸ ಇಲಾಖೆಯ ಗುಂಟೂರು ಜಿಲ್ಲೆಯಲ್ಲಿಯ ಒಂದು ನೂರು ಹಳ್ಳಿಗಳ ಗುಂಪು ಈ ಚಳವಳಿಯನ್ನು ಪ್ರಾರಂಭಿಸಬಹುದೆಂದು ನನಗೆ ದೊರೆತ ಅಧಿಕಾರದಂತೆ ನಾನು ಅಪ್ಪಣೆಕೊಡಲು ಶಕ್ತನಿದ್ದೇನೆ. ಆದರೆ ಬಾರ್ಡೋಲಿಯಲ್ಲಿ ಪ್ರತ್ಯಕ್ಷ ಕಾಯಿದೆ ಭಂಗದ ಹೋರಾಟವನ್ನು ಪ್ರಾರಂಭ ಮಾಡುವ ಮೊದಲು ನಾನು ತಮಗೆ ನಮ್ರವಾಗಿ ಬಿನ್ನವಿಸುವದೇನಂದರೆ - ಭಾರತ ಸರಕಾರದ ವರಿಷ್ಠಾಧಿಕಾರಿಗಳು ಎಂಬ ಅಧಿಕಾರದಿಂದ ತಾವು ತಮ್ಮ ಧೋರಣವನ್ನು ಬದಲಿಸಿರಿ. ಅಸಹಕಾರ ಚಳವಳಿಯನ್ನು ಮಾಡಿದ ಬಗ್ಗೆ ಶಿಕ್ಷೆ ಹೊಂದಿದ ಇನ್ನೂ ಶಿಕ್ಷೆ ಹೊಂದಲಿರುವ ಕೈದಿಗಳನ್ನು ಮುಕ್ತಮಾಡಿರಿ. ಮತ್ತು ಅಹಿಂಸೆಯ ವ್ರತದಿಂದ ನಡೆಯಿಸಿದ ಚಳವಳಿಯು ಖಿಲಾಫತ್‌ವೇ ಇರಲಿ, ಪಂಜಾಬ ಅನ್ಯಾಯದ ಬಗ್ಗೆಯೇ ಇರಲಿ, ಸ್ವರಾಜ್ಯದ ವಿಷಯಕ್ಕೆಯೇ ಇರಲಿ, ಅಥವಾ ಬೇರೊಂದು ಉದ್ದೇಶಕ್ಕಾಗಿಯೇ ಇರಲಿ ಪಿನಲ್ ಕೋಡ ಅಥವಾ ಕ್ರಿಮಿನಲ್ ಪ್ರೊಸಿಜರ್

ಕೋಡ್ ಇಲ್ಲವೆ ಇನ್ನಾವದೊ ಒಂದು ದಬ್ಬಾಳಿಕೆಯ ಕಾಯಿದೆಗೆ ಸಿಕ್ಕವರೇ ಇರಲಿ, ಅವರು ಪೂರ್ಣ ಅಹಿಂಸಾವಾದಿಗಳಿದ್ದಲ್ಲಿ ಅವರ ವಿಷಯಕ್ಕೆ ಎಳ್ಳಷ್ಟಾದರೂ ಕೈಹಾಕುವದಿಲ್ಲೆಂದು ತಾವು ತಮ್ಮ ಧೋರಣವನ್ನು ಸ್ಪಷ್ಟ ಶಬ್ದಗಳಲ್ಲಿ ಸಾರಿರಿ. ಸರಕಾರಿ ಅಧಿಕಾರಿಗಳ ನಿಯಂತ್ರಣದಿಂದ ವೃತ್ತಪತ್ರಗಳನ್ನು ಮುಕ್ತ ಮಾಡಿರಿ. ಇತ್ತೀಚೆಗೆ ಅವುಗಳಿಗಾದ ದಂಡವನ್ನೂ ಮುಚ್ಚಳಿಕೆಗಳನ್ನೂ ತಿರುಗಿ ಕೊಡಿರಿ. ಎಲ್ಲ ಸುಧಾರಿಸಿದ ರಾಷ್ಟ್ರಗಳಲ್ಲಿ ಯಾವ ಮಾನವೀಯ ಹಕ್ಕುಗಳಿಗೆ ಮಾನ್ಯತೆಯು ಕೊಡಲ್ಪಟ್ಟಿದೆಯೋ ಅಂಥವುಗಳನ್ನೇ ತಾವು ಕೈಕೊಳ್ಳಲು ಆಗ್ರಹಪೂರ್ವಕವಾಗಿ ಬಿನ್ನವಿಸುತ್ತೇನೆ. ಈ ಪತ್ರವು ಪ್ರಸಿದ್ಧವಾದ ಒಂದು ವಾರದಲ್ಲಿ ತಾವು ಅವಶ್ಯಕವಾವ ಜಾಹೀರನಾಮೆಯನ್ನು ಹೊರಡಿಸಿದರೆ ಮುಕ್ತರಾದ ರಾಜಬಂದಿಗಳು ಎಲ್ಲ ಪರಿಸ್ಥಿತಿಯನ್ನು ಹೊಸ ದೃಷ್ಟಿಯಿಂದ ನೋಡಿ ಅದರ ವಿಷಯವಾಗಿ ವಿಚಾರಮಾಡುವ ವರೆಗೆ ಏರಿಕೆಯ ಧೋರಣದ ಈ ಕಾಯಿದೆಭಂಗವನ್ನು ನಾನು ತಡೆಹಿಡಿಯುವೆನು. ನನ್ನ ಬಿನ್ನಹದಂತೆ ಸರಕಾರವು ಜಾಹೀರನಾಮೆಯನ್ನು ಹೊರಡಿಸಿದರೆ ಲೋಕಮತಕ್ಕೆ ಮನ್ನಣೆಯನ್ನೀಯಬೇಕೆಂಬ ಬುದ್ಧಿಯು ನಿಜವಾಗಿಯೂ ಸರಕಾರಕ್ಕೆ ಉಂಟಾಗಿದೆಯೆಂದು ನಾನು ತಿಳಿಯುತ್ತೇನೆ. ಮತ್ತು ಎರಡೂ ಪಕ್ಷಗಳು ಹಿಂಸೆಯ ಒತ್ತಾಯವನ್ನು ಬಿಟ್ಟು ಲೋಕಮತವು ತನ್ನಕ್ಕೆ ಇಷ್ಟವಾದ ಮಾರ್ಗವನ್ನು ಆಕ್ರಮಿಸಲು ರಾಷ್ಟ್ರಕ್ಕೆ ಸಲಹೆಯನ್ನು ಕೊಡಲು ನನಗೆ ಸಂಕೋಚವೆನಿಸುವದಿಲ್ಲ. ಹೀಗೆ ಮಾಡುವದರಿಂದಲೇ ನಮ್ಮ ಬೇಡಿಕೆಗಳನ್ನು ನಮಗೆ ಪೂರ್ಣ ಮಾಡಿಕೊಳ್ಳಲು ಬರುವದು ಎಂದು ನನಗೆ ವಿಶ್ವಾಸವೆನಿಸಿತು. ಯಾವ ಸಮಯಕ್ಕೆ ಸರಕಾರವು ತಟಸ್ಥ ಧೋರಣವನ್ನು ಬಿಡುವದೋ ಮತ್ತು ಪ್ರಕಟವಾಗಿಯೇ ಪ್ರಚಂಡಬಹುಮತವನ್ನು ಧಿಃಕರಿಸುವದೋ ಅಂತಹ ಪರಿಸ್ಥಿತಿಯಲ್ಲಿ ಕಾಯಿದೆಭಂಗದ ಏರಿಕೆಯ ಧೋರಣವು ಮತ್ತೆ ಸ್ವೀಕರಿಸಲ್ಪಡುವದು.

ತಮ್ಮ,
ವಿಶ್ವಾಸಿಕ ಹಾಗೂ ಗೆಳೆಯ
ಮೋ. ಕ. ಗಾಂಧಿ

## ಸರಕಾರದ ಉತ್ತರ

ಸರಕಾರವು ಮಹಾತ್ಮಾಜಿಯವರ ಪತ್ರಕ್ಕೆ ಕೂಡಲೆ ಕೆಳಗಿನಂತೆ ಉತ್ತರ ವಿತ್ತಿತು.

'ಸ್ವಯಂಸೇವಕ ಸಂಘದಿಂದ ವ್ಯವಸ್ಥಿತವಾಗಿ ಅತ್ಯಾಚಾರದ ಬೆದರಿಕೆ ಹಾಗೂ ತಡೆಯನ್ನುಂಟುಮಾಡುವ ಚಳುವಳಿಯು ನಡೆದೇ ಇದೆ. ಮುಂಬೈ ದಂಗೆಯಂತೆ ಇತರ ಸ್ಥಳಗಳಲ್ಲಿ ಕಾಯದೆಗೆ ವಿರುದ್ಧವಾದ ಅತ್ಯಾಚಾರಗಳು ನಡೆಸಲ್ಪಟ್ಟಿವೆ. ಅಲೀ ಬಂಧುಗಳು ಮಾಫೀ ಬೇಡಿದ ಪ್ರಸಂಗದಲ್ಲಿ ಅನುಸರಿಸಿದ ಧೋರಣವನ್ನೇ ಈಗಲೂ ಅನುಸರಿಸಿದೆ. ಸರಕಾರದ ವಿರುದ್ಧ ಯಾವ ಸಮಯದಲ್ಲಿ ತಪ್ಪು ಮಾಡಲ್ಪಡುತ್ತದೆಯೋ ಆ ಸಮಯದಲ್ಲಿ ಸರಕಾರಕ್ಕೆ ಯೋಗ್ಯವೆನಿಸಿದ ಸಮಯದಲ್ಲಿ ಆ ಕಾಯಿದೆಯ ಉಪಯೋಗವನ್ನು ಮಾಡಲಾದೀತು ಎಂದು ಹಿಂದಕ್ಕೆಯೇ ಹೇಳಿದ್ದೇವೆ. ಮಾಲವೀಯ ಪರಿಷತ್ತಿನ ಸೂಚನೆಗಳನ್ನು ಕೂಡಲೇ ನಿರಾಕರಿಸಿತೆಂದಲ್ಲ; ಯಾಕಂದರೆ, ಅಸಹಕಾರವಾದಿಗಳ ವತಿಯಿಂದ ನಡೆದ ಎಲ್ಲ ಬೇಕಾಯದೇಶೀರ ಚಳುವಳಿ ನಿಲ್ಲಿಸಲ್ಪಟ್ಟೀತು ಎಂದು ಆ ಸೂಚನೆಗಳಲ್ಲಿತ್ತು.'

ಹೀಗೆ ಗಾಂಧೀಜಿಯವರ ಎಲ್ಲ ಆಕ್ಷೇಪಗಳಿಗೆ ಸರಕಾರವು ಉತ್ತರವಿತ್ತು ತನ್ನ ದಬ್ಬಾಳಿಕೆಯನ್ನು ಸಮರ್ಥಿಸಿಗೊಂಡಿತು.

---

# ಶಾಸನೋಲ್ಲಂಘನ

೧ ಮಹಾತ್ಮರ ೧೧ ಬೇಡಿಕೆಗಳು

೨ ಆಯರ್ವಿನ್ನರಿಗೆ

೩ ಧರಸಾನಾ ಉಪ್ಪಿನ ಆಗರದ ಮೇಲೆ ದಾಳಿ

೪ ಲಂಡನ್ನಿನ ಮಾರ್ಗದಲ್ಲಿ

೫ ದುಂಡು ಮೇಜಿನ ನಂತರ

# ಮಹಾತ್ಮರ ೧೧ ಬೇಡಿಕೆಗಳು

[ ಲಾಹೋರ ಕಾಂಗ್ರೆಸ್ಸಿನಲ್ಲಿ ಕಾಂಗ್ರೆಸ್ಸಿನ ಧ್ಯೇಯವು ಸಂಪೂರ್ಣ ಸ್ವಾತಂತ್ರ್ಯವೆಂದೂ ಅದನ್ನು ದೊರಕಿಸಲು ಸವಿನಯ ಕಾಯದೇಭಂಗವನ್ನು ಕೈಕೊಳ್ಳಬಹುದೆಂದೂ ನಿರ್ಣಯವಾದೊಡನೆ ರಾಷ್ಟ್ರದಲ್ಲಿ ಗಡಿಬಿಡಿಯುಂಟಾಯಿತು. ಮುಖಂಡರು ಮಂತ್ರಿಗಳೂ ಬಾದಶಹರ ಘೋಷಣೆಯ ಬಗ್ಗೆ ಭಾಷ್ಯಮಾಡಲು ಉಪಕ್ರಮಿಸಿದರು. ಮಹಾತ್ಮರ ಸತ್ಯದ ಮುಂದೆ ಮಾಯಾರೂಪವು ಅಡಗಿ ಮೂಲರಾಕ್ಷಸಿ ರೂಪವು ಹೊರಬಿದ್ದಿತು. ಸ್ವಯಂನಿರ್ಣಯ ಅಥವಾ ಸಾಮುದಾಯಿಕ ನಿರ್ಣಯ ಎಂಬ ಅಪೇಕ್ಷೆಯನ್ನು ಭಾರತವು ಮಾಡಕೂಡದು ಎಂದು ವೈಸರಾಯರು ಸ್ಪಷ್ಟವಾಗಿ ಒಡನುಡಿದರು. ಅವರ ಭಾಷಣವನ್ನು ಉದ್ದೇಶಿಸಿಯೇ ಅವರಿಗಾಗಿಯೇ ಈ ಪ್ರಕಟನೆಯನ್ನು ಮಹಾತ್ಮರು ಪ್ರಕಟಿಸಿದರು. ]

## ಪ್ರಕಟನೆ

‘ ವಾತಾವರಣದಲ್ಲಿ ಮುಸುಕಿದ್ದ ಕಗ್ಗತ್ತಲೆಯನ್ನು ಕಳೆದುದಕ್ಕಾಗಿ ವೈಸರಾಯರ ಆಭಾರ ಮನ್ನಿಸುವುದು ಅವಶ್ಯವಿದೆ. ಈ ನಮ್ಮ ಹಾಗು ಅವರ ಭೂಮಿಕೆಯನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವ.

ಪ್ರತಿಯೊಬ್ಬ ಲಕ್ಷಾಧೀಶನು ೭ ಬಿಲ್ಲಿ ದಿನಾಲು ದೊರಕಿಸುವ ಕೂಲಿಕಾರನ ಸ್ಥಿತಿಗೆ ಬರುವವರೆಗೂ ವಸಹಾತಿ ಸ್ವರಾಜ್ಯದ ಕೊಡುಗೆಯನ್ನು ತಡೆಹಿಡಿಯಲು ವೈಸರಾಯರಿಗೆ ಏನೂ ತೊಂದರೆ ತೋರಲಿಕ್ಕಿಲ್ಲ. ಕಾಂಗ್ರೆಸ್ಸಿನ ಕೈಯಲ್ಲಿ ಅಧಿಕಾರವಿದ್ದಿದ್ದರೆ, ಈಗಿಂದೀಗ ಈ ಕ್ಷಣಕ್ಕೆ ಅರೆಹೊಟ್ಟೆಯಿಂದ ಬಳಲುವ ರೈತನನ್ನು ಲಕ್ಷಾಧೀಶನ ಜೀವನಮಟ್ಟಕ್ಕೆ ಒಯ್ಯಲು ಶಕ್ಯವಿದ್ದಿತು. ರೈತನಿಗೆ ತನ್ನ ಸ್ಥಿತಿಯನ್ನು ತಿಳಿದುಕೊಳ್ಳುವ ಜ್ಞಾನ ಉಂಟಾದರೆ, ತನ್ನನ್ನು ಈ ಕಂಗಾಲ ಸ್ಥಿತಿಗೆ ತಂದುದು ದೈವವಿರದೆ ಪ್ರಚಲಿತ ರಾಜ್ಯಪದ್ಧತಿ ಅಧಿಕಾರವೆಂದು ತಿಳಿದರೆ, ಆ ಕ್ಷಣಕ್ಕೆ ರೈತರು ಅತ್ಯಂತ ಅಧೀರರಾಗಿ, ಕಾಯಿದೆ,

ಬೇಕಾಯಿದೆ, ಅತ್ಯಾಚಾರ, ಅನತ್ಯಾಚಾರ ಯಾವುದನ್ನೂ ಲೆಕ್ಕಿಸದೆ ಕ್ಷಣಾರ್ಧದಲ್ಲಿ ಏನನ್ನೂ ಮಾಡಲು ಸಿದ್ಧರಾಗಬಹುದು. ರೈತರಿಗೆ ಯೋಗ್ಯ ದಾರಿಯನ್ನು ತೋರಿಸಲು ಶಕ್ಯವಿದೆಯೆಂದು ಕಾಂಗ್ರೆಸ್ಸಿಗೆ ಆಶೆಯಿದೆ.

ಆದುದರಿಂದ ಲಾರ್ಡ ಆಯರ್ವಿನ್ನರು ಕೆಳಗಿನ ಸಂಗತಿಗಳನ್ನಾದರೂ ಕೂಡಲೆ ಅಮಲಿನಲ್ಲಿ ತರಬಹುದೇ ?

೧. ಮದ್ಯಪಾನವನ್ನು ಪೂರ್ಣವಾಗಿ ನಿಲ್ಲಿಸುವುದು. ೨. ಹುಂಡಣಾವಳಿಯ ಬೆಲೆಯನ್ನು ೧೬ ಪೆನ್ಸ ಮಾಡುವದು. ೩. ಭೂಕಂದಾಯವನ್ನು ೧೦೦ಕ್ಕೆ ೫೦ ರಂತೆ ಕಡಿಮೆಮಾಡುವದು. ಮತ್ತು ಭೂಕಂದಾಯದ ಖಾತೆಯನ್ನು ಕಾಯದೇ ಮಂಡಳಕ್ಕೆ ಅಧೀನಗೊಳಿಸುವುದು. ೪. ಉಪ್ಪಿನ ಕರವನ್ನು ನಿಲ್ಲಿಸುವದು. ೫. ಸೈನ್ಯದ ಖರ್ಚನ್ನು ಮೊದಮೊದಲು ೧೦೦ಕ್ಕೆ ೫೦ ರಷ್ಟಾದರೂ ಕಡಿಮೆ ಮಾಡುವದು. ೬. ವರಿಷ್ಠ ಅಧಿಕಾರಿಗಳ ಪಗಾರವನ್ನು ಅರ್ಧದಷ್ಟು ಕಡಿಮೆಮಾಡಿ ಭೂಕಂದಾಯದಿಂದ ಕಡಿಮೆಯಾದುದನ್ನು ತುಂಬಿಕೊಳ್ಳುವದು. ೭. ಪರದೇಶಿ ಬಟ್ಟೆಗಳ ಮೇಲೆ ಸಂರಕ್ಷಕ ಸುಂಕವನ್ನು ಹಾಕುವದು. ೮. ಬಂದರಗಳ ವ್ಯಾಪಾರವನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಕಾಯಿದೇ ಮಾಡುವದು. ೯. ಕೊಲೆ ಅಥವಾ ಕೊಲೆಯ ಪ್ರಯತ್ನದ ಬಗ್ಗೆ ಶಿಕ್ಷೆಯಾದ ಕೈದಿಗಳ ಹೊರತು ಉಳಿದ ಎಲ್ಲ ರಾಜಕೀಯ ಕೈದಿಗಳನ್ನು ಮುಕ್ತಮಾಡುವದು ಇಲ್ಲವೇ ನ್ಯಾಯಾಸನದ ಮುಂದೆ ವಿಚಾರ ಮಾಡುವದು, ಎಲ್ಲ ರಾಜಕೀಯ ಖಟ್ಲೆಗಳನ್ನು ತಿರುಗಿ ತೆಗೆದುಕೊಳ್ಳುವದು, ೧೨೪ ಅ ಕಲಮಿನ ಹಾಗು ೧೮೧೮ ರ ೩ನೇ ರೆಗ್ಯುಲೇಶನ್ನದ ಉಪಯೋಗವನ್ನು ರದ್ದುಮಾಡುವದು, ಮತ್ತು ಗಡಿಪಾರು ಮಾಡಿದ ಎಲ್ಲ ಹಿಂದೀಯರಿಗೆ ತಿರುಗಿಬರಲು ಅಪ್ಪಣೆಯನ್ನೀಯುವದು. ೧೦. ಗುಪ್ತ ಪೋಲೀಸ ಖಾತೆಯನ್ನು ಕಿತ್ತೊಗೆಯಬೇಕು. ಇಲ್ಲವೆ ಲೋಕಮತದ ನಿಯಂತ್ರಣದ ಕೆಳಗೆ ತರಬೇಕು. ೧೧. ಸ್ವಸಂರಕ್ಷಣೆಯ ಸಲುವಾಗಿ ಸಾರ್ವಜನಿಕ ಹಿತದ ಬಂಧನವನ್ನು ಲಕ್ಷದಲ್ಲಿಟ್ಟು ಶಸ್ತ್ರಾಸ್ತ್ರಗಳ ಉಪಯೋಗಕ್ಕೆ ಅಪ್ಪಣೆಕೊಡಬೇಕು.

ಇಂಥ ಅತ್ಯಂತ ಆವಶ್ಯಕಗಳ ಪೂರ್ಣಯಾದಿಯು ಇದು ಇರುವದೆಂದಲ್ಲ-ಆದರೆ ಈ ಅತ್ಯಂತ ಸಾದಾ ಅವಶ್ಯಕತೆಗಳ ನಮ್ಮ ಬೇಡಿಕೆಗಳನ್ನಾದರೂ

ವ್ಹಾಯಿಸರಾಯರು ಪೂರೈಸಲಿ. ಅಂದರೆ ಅವರಿಗೆ ಕಾಯಿದೆಭಂಗದ ಭಾಷೆ ಕೇಳಬರಲಿಕ್ಕಿಲ್ಲ. ಆಗ ತನ್ನ ವಿಚಾರವನ್ನು ವ್ಯಕ್ತ ಮಾಡುವ ಮತ್ತು ಬೇಡಿಕೆಗಳನ್ನು ಮಂಡಿಸುವ ಪೂರ್ಣ ಸ್ವಾತಂತ್ರ್ಯ ಇದ್ದಂಥ ಯಾವದೇ ಪರಿಷತ್ತಿನಲ್ಲಿ ಕಾಂಗ್ರೆಸ್ಸು ಆನಂದದಿಂದ ಭಾಗವಹಿಸೀತು. ಇದರರ್ಥವಿಷ್ಟೇ, ಇಂತಹ ಜೀವನಾವಶ್ಯಕವಾದ ತೀರ ಸಾದಾ ಬೇಡಿಕೆಗಳು ಕೂಡ ನಿರಾಕರಿಸಲ್ಪಟ್ಟರೆ, ಸವಿನಯ ಕಾಯಿದೆಭಂಗದ ಪ್ರಾರಂಭವು ಇದೇ ತಾನೇ ಆಗುವದು. ಇತರ ರಾಷ್ಟ್ರಗಳಲ್ಲಿ ಸ್ವಾತಂತ್ರ್ಯವನ್ನು ದೊರಕಿಸುವ ಭಿನ್ನ ಸಾಧನ ಹಾಗೂ ಮಾರ್ಗಗಳಿರಬಹುದು. ಆದರೆ ಹಿಂದುಸ್ಥಾನದ ಮಟ್ಟಿಗೆ ಅನತ್ಯಾಚಾರಿ ಅಸಹಕಾರ ಮಾರ್ಗದ ಹೊರತು ಗತ್ಯಂತರವಿಲ್ಲ. ಈ ಸ್ವಾತಂತ್ರ್ಯ ಮಂತ್ರದ ಪ್ರಣೀತರು ನಾವಾಗೋಣ. ತಾವೂ ಆಗಿರಿ. ನಮ್ಮ ಸರ್ವಸ್ವವನ್ನು ಈ ಹಿಂದೀ ಸ್ವಾತಂತ್ರ್ಯದ ಯುದ್ಧದಲ್ಲಿ ಅರ್ಪಿಸುವ ಧೈರ್ಯ ಹಾಗೂ ಸಾಮರ್ಥ್ಯವನ್ನು ದೇವರು ನಮಗೆ ದಯಪಾಲಿಸಲಿ. ಈ ಯುದ್ಧವು ಬಾಗಿಲಿಗೆ ಬಂದು ನಿಂತಿದೆ.

'ಯಂಗ್ ಇಂಡಿಯಾ' ತಮ್ಮ ವಿಶ್ವಾಸಿಕ

೨೮-೧-೧೯೩೦ ಮೋ. ಕ. ಗಾಂಧಿ

# ಶಾಸನೋಲ್ಲಂಘನ

[ ಮಹಾತ್ಮರು ಸುಪ್ರಸಿದ್ಧವಾದ ದಾಂಡಿ ಯಾತ್ರೆಯನ್ನು ಕೈಕೊಳ್ಳುವ ಮುನ್ನ ತಾವು ಉಪ್ಪಿನ ಸತ್ಯಾಗ್ರಹವನ್ನು ಏಕೆ, ಹೇಗೆ ಪ್ರಾರಂಭಿಸುತ್ತೇವೆ ಎಂಬುದನ್ನು ವೈಸರಾಯರಿಗೆ ಸತ್ಯಾಗ್ರಹದ ನೀತಿಯಂತೆ ಬರೆದು ತಿಳಿಸಿದರು ಅದನ್ನು ಇಂಗ್ಲೀಷ ತರುಣರಾದ ರೆಜಿನಾಲ್ಡರು ಸ್ವಂತವಾಗಿ ಒಯ್ದು ವೈಸರಾಯರಿಗೆ ಕೊಟ್ಟರು. ]

## ಶ್ರೀಮಂತ ಅಯರ್ವಿನರಿಗೆ—

ಪ್ರಿಯ ಗೆಳೆಯ,

ಇಷ್ಟು ವರ್ಷ ಯಾವ ಜೆಂಕಿಯಲ್ಲಿ ಧುಮುಕಲು ಹೆದರುತ್ತಿದ್ದೆನೋ ಅದರಲ್ಲಿ ಧುಮುಕಿ, ಸವಿನಯ ಶಾಸನೋಲ್ಲಂಘನವನ್ನು ಪ್ರಾರಂಭಿಸುವ ಮುನ್ನ, ನಿಮ್ಮನ್ನು ಆನಂದದಿಂದ ಕಂಡು ಏನಾದರೂ ಪರಿಹಾರ ಮಾರ್ಗವನ್ನು ಹುಡುಕುವದಕ್ಕಾಗಿ ನಿಮ್ಮ ಬಳಿ ಸಾರುತ್ತಿದೇನೆ. ನನ್ನ ಆತ್ಮಶ್ರದ್ಧೆ ಸ್ಪಷ್ಟವಾಗಿದೆ, ಶುದ್ಧವಾಗಿದೆ. ಸಜೀವ ಪ್ರಾಣಿ ಯಾವುದನ್ನೂ ಉದ್ದೇಶಪೂರ್ವಕವಾಗಿ ನಾನು ನೋಯಿಸಲಾರೆ. ಅಂಥದರಲ್ಲಿ, ನನಗವರು ಎಷ್ಟೋ ಹಾನಿಮಾಡಿರಲಿ, ನನ್ನ ಸೋದರ–ಮಾನವರನ್ನು ಎಂದೂ ನೋಯಿಸಲಾರೆ. ಅಂತೇ ಬ್ರಿಟಿಷ್ ಸರಕಾರವೊಂದು ಶಾಪ ಎನ್ನುತ್ತೇನಾಗಲಿ ಇಂಗ್ಲೀಷ ಜನ ಒಬ್ಬನನ್ನು ಕೂಡ ನೋಯಿಸಲಾರೆ; ಹಿಂದುಸ್ಥಾನದಲ್ಲಿ ಅವನಿಗಿರುವ ನ್ಯಾಯವಾದ ಸೊತ್ತು ಸಂಬಂಧ ಯಾವುದನ್ನೂ ನಾಶಗೊಳಿಸಲಾರೆ.

ಅಪಾರ್ಥವಾಗದಿರಲಿ ನನ್ನ ಮಾತು. ಇಂಗ್ಲೀಷರು ಹಿಂದುಸ್ಥಾನದಲ್ಲಿ ಮಾಡುವ ರಾಜ್ಯಭಾರ ಪೀಡೆಯೆಂದು ಭಾವಿಸಿದರೂ, ಅದರಿಂದ ಇತರ ಜನರಿಗಿಂತ ಇಂಗ್ಲೀಷ ಜನ ಅಧಮರು ಎಂದು ನಾನು ತಿಳಿದಿಲ್ಲ. ಇಂಗ್ಲೀಷರಲ್ಲಿ ಎಷ್ಟೋ ಜನ ನನಗೆ ಅತ್ಯಂತ ಸ್ನೇಹಪಾತ್ರರಾಗಿರುವದು ನನ್ನ ಭಾಗ್ಯ.

ಇಂಗ್ಲೀಷರ ಆಡಳಿತದ ಕೆಡುಕಿನ ವಿಷಯವಾಗಿ ನನಗೆ ಗೊತ್ತಿರುವುದೆಲ್ಲ ಹೆಚ್ಚಾಗಿ ಈ ಆಡಳಿತದ ನಿಜ ಚಿತ್ರವನ್ನು, ಅಪ್ರಿಯವಾಗಿದ್ದರೂ ಸ್ಪಷ್ಟ ನುಡಿದ ಧೀರರಾದ ಇಂಗ್ಲೀಷು ಗೆಳೆಯರ ಬರವಣಿಗೆಯಿಂದ ಗ್ರಹಿಸಿದ್ದೇನೆ.

ನಾನಾದರೂ ಇಂಗ್ಲೀಷು ಆಡಳಿತವನ್ನು ಪೀಡೆ ಎಂದು ಅನ್ನುತ್ತೇನೆ. ಏಕೆ ?

ದಿನೇ ದಿನೇ ಜೀವಹಿಂಡಿ, ಈ ದೇಶ ಹೊರಲಾರದಂಥ ಮನೆಹಾಳು ಶ್ರೀಮಂತಿಕೆಯ ದಿವಾನಿ, ಫೌಜೀ ಆಡಳಿತವನ್ನು ನಡೆಸಿ, ಮೂಕ ಜನಕೋಟಿಯನ್ನು ಬಡತನಕ್ಕೆ ನೂಕಿದೆ ಈ ಆಡಳಿತ.

ರಾಜಕೀಯ ದೃಷ್ಟಿಯಿಂದ ನಮ್ಮನ್ನು ಗುಲಾಮಗಿರಿಗೆ ತುಳಿದಿದೆ. ನಮ್ಮ ಸಂಸ್ಕೃತಿಯ ಬೇರನ್ನೇ ಕಡಿದು ಹಾಕಿದೆ. ನಿಶ್ಶಸ್ತ್ರರನ್ನಾಗಿ ಮಾಡಿ ನಮ್ಮನ್ನು ಆಧ್ಯಾತ್ಮಹೀನರಾಗಿಸಿದೆ. ಅಂತಶ್ಶಕ್ತಿಹೀನರಾಗಿ ಸಾರ್ವತ್ರಿಕ ನಿರಾಯುಧೀಕರಣಕ್ಕೆ ತುತ್ತಾಗಿ ಹೇಡಿ ಕುನ್ನಿಗಳಂತೆ ನಿಸ್ಸಹಾಯರಾಗಿದೇವೆ.

ನನ್ನ ದೇಶಬಾಂಧವರನೇಕರಂತೆ ನಾನೂ ಈ ಚಕ್ರಗೋಷ್ಠಿಯಿಂದ ಏನಾದರೂ ಪರಿಹಾರೋಪಾಯ ತೋರಿಬಂದೀತು ಎಂದು ಬಹಳವಾಗಿ ನೆಚ್ಚಿಕೊಂಡಿದ್ದೆ. ಆದರೆ ಅಧಿನಿವೇಶ ಸ್ವರಾಜ್ಯ—ಡೊಮಿನಿಯನ್ ಸ್ಟೇಟಸ್—ಯೋಜನೆಗೆ ಬೆಂಬಲಕೊಡುತ್ತೇವೆ ಎಂದು ವಚನಕೊಡಲಿಕ್ಕೆ ನಿಮಗೂ ನಿಮ್ಮ ಬ್ರಿಟಿಷ್ ಮಂತ್ರಿಮಂಡಲಕ್ಕೂ ಸಾಧ್ಯವಿಲ್ಲವೆಂದಾಗಲೇ, ಈ ಗೋಷ್ಠಿ, ಬಾಯಿಲ್ಲದ ಮೂಕ ಹಿಂದುಸ್ಥಾನ ಅರಿಯದೆಯೂ ಮಾತಾಳಿ ಭಾರತೀಯರು ಅರಿತು ಅರಿಯದ್ದೂ ಆರ್ತರಾಗಿ ಬಯಸುತ್ತಿರುವ ಸುಧಾರಣೆಗಳನ್ನು ನೀಡಲಾರದಾಯಿತು. ಪಾರ್ಲಮೆಂಟಿನ ತೀರ್ಮಾನಕ್ಕೆ ಪೂರ್ವಭಾವಿಯಾಗಿ ಹೀಗೆ ಮಾಡಲು ಸಾಧ್ಯವೇ ಎಂಬ ತೊಡಕೇ ಇರಲಿಲ್ಲ. ಪಾರ್ಲಿಮೆಂಟಿನ ತೀರ್ಮಾನಕ್ಕೆ ಮೊದಲೇ ಹೀಗೆ ಯಾವುದಾದರೊಂದು ಯೋಜನೆಗೆ ಬ್ರಿಟಿಷ್ ಮಂತ್ರಿಮಂಡಲ ಬೆಂಬಲಕೊಟ್ಟ ಸಂದರ್ಭಗಳೇನು ಇಲ್ಲದಿಲ್ಲ.

ದಿಲ್ಲಿ ಭೇಟಿ ವಿಫಲವಾದ ಮೇಲೆ ಪಂಡಿತ ಮೋತೀಲಾಲ ನೆಹರೂಗೂ ನನಗೂ ೧೯೨೮ ರ ಕಲಕತ್ತಾ ಅಧಿವೇಶನದಲ್ಲಿ ಕಾಂಗ್ರೆಸ್ಸು ಮಾಡಿದ ಮಹಾ ನಿರ್ಣಯದಂತೆ ನಡೆದುಕೊಳ್ಳುವದಲ್ಲದೆ ಬೇರೆ ದಾರಿಯೇ ಇರಲಿಲ್ಲ.

ಆದರೆ, ನಿಮ್ಮ ಭಾಷಣದಲ್ಲಿ ನೀವು ಬಳಸಿರುವ ಡೊಮಿನಿಯನ್ ಸ್ಟೇಟಸ್ ಶಬ್ದಕ್ಕೆ ರೂಢಿಯಲ್ಲಿರುವ ಅರ್ಥವೇ ಇದ್ದರೆ ಸ್ವಾತಂತ್ರ್ಯದ ನಿರ್ಣಯದಿಂದ ಗಾಬರಿಗೊಳ್ಳಬೇಕಾದ್ದಿಲ್ಲ. ಅಧಿನಿವೇಶ ಸ್ವರಾಜ್ಯವೆಂದರೂ ಸ್ವಾತಂತ್ರ್ಯವೆಂದರೂ ಒಂದೇ ಎಂದು ಹಿರಿಯರಾದ ಬ್ರಿಟಿಷ್ ರಾಜನೀತಿ ವೇತ್ತರೇ ಹೇಳಿಲ್ಲವೆ ? ಆದರೆ ನನಗೇನೋ ಅಳುಕು; ತತ್‌ಕ್ಷಣವೇ ಹಿಂದು ಸ್ಥಾನಕ್ಕೆ ಅಂಥ ಸ್ವರಾಜ್ಯವನ್ನು ಕೊಡುವ ಉದ್ದೇಶವೇ ನಿಮಗಿಲ್ಲವೆಂದು.

ಇವೆಲ್ಲ ಗತಕಾಲದ ಇತಿಹಾಸ. ನಿಮ್ಮ ಘೋಷಣೆಯಾದ ಮೇಲೆ ನಡೆದ ಹಲವಾರು ವಿದ್ಯಮಾನ ಬ್ರಿಟಿಷ್ ಮನೋವೃತ್ತಿ ಹೇಗೆ ಹರಿಯುತ್ತಿದೆ ಎಂಬುದನ್ನು ತಿಳಿಸುತ್ತಿದೆ.

ಹಿಂದುಸ್ಥಾನದೊಂದಿಗೆ ಬ್ರಿಟನ್ ಮಾಡುತ್ತಿರುವ ವ್ಯಾಪಾರಕ್ಕೆ ಊನ ವಾಗುವಂಥದಾಗಲಿ, ಬ್ರಿಟನ್–ಹಿಂದುಸ್ಥಾನಗಳ ಪರಸ್ಪರ ವ್ಯವಹಾರದ ನಿಷ್ಪಾಕ್ಷಿಕ ಪರಿಶೀಲನೆಗಾಗಿ, ತಮ್ಮ ಧೋರಣೆಯಲ್ಲಿ ಇಂಥ ಯಾವ ವ್ಯತ್ಯಾಸಕ್ಕೂ ಪ್ರಮುಖ ಬ್ರಿಟಿಷ್ ರಾಜಕೀಯ ನಾಯಕರು ಒಪ್ಪರೆಂಬುದು ಬೆಳ್ಳು ಬೆಳಕಾಗಿದೆ. ಈ ಶೋಷಣವನ್ನು ನಿಲ್ಲಿಸಲು ಏನೂ ಮಾಡದಿದ್ದರೆ ಹಿಂದು ಸ್ಥಾನದ ನೆತ್ತರನ್ನು ಇನ್ನೂ ಹೆಚ್ಚಾಗಿ ವೇಗವಾಗಿ ಹಿಂಡಬೇಕಾದೀತು.

ರೂಪಾಯಿಗೆ ಒಂದೂವರೆ ಷಿಲಿಂಗ್ ವಿನಿಮಯದ ಧಾರಣೆಯಿಂದ ಒಂದೇ ಏಟಿಗೆ ಹಿಂದುಸ್ಥಾನಕ್ಕೆ ಕೋಟ್ಯಾಂತರ ರೂಪಾಯಿ ನಷ್ಟವಾಗುತ್ತದೆ. ಕೊಚ್ಚಿ ಹೋಗುತ್ತದೆ. ಆದರೂ ನಿಮ್ಮ ಅರ್ಥಮಂತ್ರಿಗೆ ಅದೇ ಪರಮ ಸಿದ್ಧಾಂತ. ಇಂಥವು ಇನ್ನೂ ಎಷ್ಟೋ ಇವೆ. ಇದನ್ನೂ ಅವನ್ನೂ ಯಾವುದೋ ಒಂದು ಬಗೆಯ ಸರಳ ಮಾರ್ಗದಿಂದ ಸವಿನಯವಾಗಿ ಈ ತೀರ್ಮಾನವನ್ನು ಭಗ್ನಗೊಳಿಸಬೇಕೆಂದು ಯತ್ನಿಸಿದರೆ, ಈ ಗಂಭೀರ ಪ್ರಯತ್ನವನ್ನು ಅದುಮಿ ಹಾಕಲು ದೇಶದ ಶ್ರೀಮಂತರ ಸಹಾಯ ಕೇಳಲು ನೀವೂ ಹಿಂದೆಗೆಯಲಿಲ್ಲ. ಯಾವ ಹೆಸರಿನಲ್ಲಿ ಈ ನೆರವು ಬೇಡುತ್ತೀರಿ ಗೊತ್ತೇ ? ಹಿಂದುಸ್ಥಾನವನ್ನು ಪುಡಿಪುಡಿಯಾಗಿ ಧೂಳಾಗಿ ಮಾಡುತ್ತಿರುವ ಆಡಳಿತದ ಹೆಸರಿನಲ್ಲಿ ನಮ್ಮ ಸ್ವಾತಂತ್ರ್ಯದಾಹದ ಕಾರಣವೇನೆಂಬುದನ್ನು ರಾಷ್ಟ್ರದ ಹೆಸರಿನಲ್ಲಿ ದುಡಿಯುತ್ತಿರುವ ಕೆಲಸಗಾರರೆಲ್ಲ ಅರಿತುಕೊಂಡು, ಎಲ್ಲರಿಗೂ ತಿಳಿಸದಿದ್ದರೆ ನಮಗೆ ಬೇಡದ ರೀತಿಯಲ್ಲಿ ಸ್ವಾತಂತ್ರ್ಯ ಬಂದೇ ಬಿಟ್ಟೀತು ಎಂಬ ಭಯವಿದೆ. ಯಾವ

ಮೂಕ ಜನಕೋಟಿಗಾಗಿ ಈ ಸ್ವಾತಂತ್ರ್ಯವನ್ನು ಬಯಸುತ್ತಿದ್ದೇವೋ, ಯಾರಿಗಾಗಿ ಅದು ಪರಿಗ್ರಾಹ್ಯವೋ ಅವರಿಗೆ ಅದು ನಿಷ್ಪ್ರಯೋಜಕವಾದೀತು. ಈ ಕಾರಣಕ್ಕಾಗಿಯೇ ಇತ್ತೀಚೆಗೆ ನಾನು ಸ್ವಾತಂತ್ರ್ಯವೆಂದರೇನೆಂಬುದನ್ನು ಮಹಾಜನಕ್ಕೆ ಮೇಲಿಂದ ಮೇಲೆ ತಿಳಿಸುತ್ತಿರುವುದು.

ಕೆಲವು ಗಣನೀಯ ಅಂಶಗಳನ್ನು ನಿಮಗೆ ತಿಳಿಸಲು ಬಯಸುತ್ತೇನೆ. ಸರಕಾರದ ಒಟ್ಟು ಆದಾಯದ ಬಹುಭಾಗ ನೆಲಗಂದಾಯದಿಂದ ಬರುತ್ತಿದೆ. ಈ ಕಂದಾಯದ ಅತಿಭಾರ ಸ್ವತಂತ್ರ ಹಿಂದುಸ್ಥಾನದಲ್ಲಿ ಬಹುಭಾಗವು ಕಡಿಮೆಯಾಗಲೇಬೇಕು. ಬಹಳವಾಗಿ ಪ್ರಶಂಸಿತವಾಗುತ್ತಿರುವ ನಿಮ್ಮ ಕಂದಾಯ ಪದ್ಧತಿ ರೈತರಿಗೆ ಅನುಕೂಲ ಮಾಡಲಿಲ್ಲ; ಒಬ್ಬಿಬ್ಬರು ಜಮೀನುದಾರರಿಗೆ ಅನುಕೂಲ ಮಾಡಿತು. ರೈತನೇನೊ ಈಗಲು ಮೊದಲಿನಷ್ಟೇ ಅಸಹಾಯನಾಗಿದಾನೆ. ಧಣಿಗೆ ಇಷ್ಟವಾದರೆ ಅವನು ರೈತ, ಇಲ್ಲವಾದರೆ ಇಲ್ಲ. ಅಂತೇ ಕಂದಾಯವನ್ನು ಕಡಿಮೆ ಮಾಡುವದಷ್ಟೇ ಅಲ್ಲ, ರೈತನ ಹಿತವೇ ಮುಖ್ಯ ಲಕ್ಷ್ಯವಾಗುವಂತೆ ಇಡೀ ಕಂದಾಯದ ಪದ್ಧತಿಯನ್ನೇ ಬದಲಿಸಬೇಕು. ಆದರೆ ಬ್ರಿಟಿಷ್ ಪದ್ಧತಿ ಅವನ ಪ್ರಾಣವನ್ನೇ ಗಾಣವಾಡುವಂತೆ ಇದೆ. ಉಪ್ಪು ತಿನ್ನದೆ ಬದುಕಲಾದೀತೆ ? ಆ ಉಪ್ಪಿಗೂ ರೈತನೇ ತೆರಿಗೆ ಕೊಡಬೇಕು. ಅದೂ ಎಷ್ಟು ? ಅವನ ಮೈ ಮುರಿಯುವಷ್ಟು. ಇಷ್ಟು ಹೃದಯಹೀನ ನಿಷ್ಪಕ್ಷಪಾತ ! ಹಣವಂತರಿಗಿಂತ ಬಡರೈತನಿಗೇ ಉಪ್ಪು ಹೆಚ್ಚು ಬೇಕು. ಅಲ್ಲದೆ ರೈತರೇ ತಾನೆ ಬಹುಜನ. ಇದರಿಂದಂತೂ ಉಪ್ಪಿನ ತೆರಿಗೆಯ ಪೂರ್ಣಭಾರ ರೈತನ ಮೇಲೆ ಬೀಳುತ್ತದೆ. ಮದ್ಯಪಾನ, ಅಫೀಮು, ಗಾಂಜಾಗಳ ವರಮಾನವೂ ಬಡವರಿಂದಲೇ ಬರುತ್ತದೆ. ಇದರಿಂದ ಅವರ ನೀತಿ, ಆರೋಗ್ಯ ಎರಡೂ ನಿರ್ಮೂಲವಾಗುತ್ತವೆ. ವ್ಯಕ್ತಿಸ್ವಾತಂತ್ರ್ಯದ ಕಳ್ಳನೆವ ಹೇಳಿ ಅದನ್ನು ಸಮರ್ಥಿಸುತ್ತೀರಿ. ನಿಜವಾಗಿ ಅದರ ಕಾರಣ ಅದರಿಂದ ಬರುವ ವರಮಾನ. ೧೯೧೯ ರ ಸುಧಾರಣೆಗಳಲ್ಲಿ ಈ ಬಾಬನ್ನು 'ಉಭಯಾಧಿಕಾರ' ದಲ್ಲಿ—ಡಯಾರ್ಕಿ—ಪ್ರಜಾತಂತ್ರದ ಭಾಗಕ್ಕೆ ವಹಿಸಿಕೊಟ್ಟಿರಿ. ಪಾನ ನಿಷೇಧದ ಹೊಣೆ ಅವರ ತಲೆಯ ಮೇಲೇ ಬೀಳಲಿ, ಮೊದಲಿಂದಲೂ ಒಳಿತನ್ನು ಮಾಡಲು ಅವರಿಗೆ ಶಕ್ತಿಯೇ ಇಲ್ಲದಿರಲಿ ಎಂದು. ಯಾರಾದರೂ ದುರ್ದೈವಿ ಮಂತ್ರಿ ಈ ವರಮಾನವನ್ನು ನಿಲ್ಲಿಸಿದನೊ ಶಿಕ್ಷಣಕ್ಕೆ ಸೊನ್ನೆಸುತ್ತಬೇಕು. ಇದರ ಬದಲು ಹೊಸ ವರಮಾನಕ್ಕೆ ಈಗಿನ ಪರಿಸ್ಥಿತಿಯಲ್ಲಿ ದಾರಿಯೇ

ಇಲ್ಲವಲ್ಲ. ಹೀಗೆ ಮೇಲಿಂದ ತೆರಿಗೆಯ ಭಾರ; ಇತ್ತ ಕೆಳಗಿಂದ ಮುಖ್ಯವಾದ ಸಾರ್ವತ್ರಿಕೋದ್ಯೋಗವಾದ ನೂಲುಗಾರಿಕೆಯ ನಾಶವಾದ್ದರಿಂದ ಸಂಪಾದನೆಗೆ ಬಂದ ಲೋಪ–ಈ ಎರಡರ ನಡುವೆ ರೈತ ನುಚ್ಚುನುರಿಯಾಗಿದಾನೆ.

ಇಲ್ಲಿಗೇ ಮುಗಿಯಲಿಲ್ಲ ಹಿಂದುಸ್ಥಾನದ ವಿನಾಶದ ಕತೆ. ಹಿಂದುಸ್ಥಾನದ ಹೆಸರಿನಲ್ಲಿ ಮಾಡಿದ ಸಾಲಗಳು ಬೇರೆ ಇವೆ. ಇತ್ತೀಚಿಗೆ ಪತ್ರಿಕೆಗಳಲ್ಲಿ ಈ ವಿಷಯ ಸಾಕಷ್ಟು ಮಥನವಾಗಿದೆ. ಈ ಸಾಲಗಳನ್ನೆಲ್ಲ ನಿಷ್ಪಕ್ಷಪಾತವಾದ ಪಂಚಾಯತಿಗೆ ಒಪ್ಪಿಸಬೇಕು ಸ್ವತಂತ್ರಭಾರತ. ಅವರು ಕೂಲಂಕಷರಾಗಿ ಪರೀಕ್ಷಿಸಿ ಅನ್ಯಾಯವೆಂದು ತೀರ್ಮಾನಿಸಿದ ಸಾಲವನ್ನು ಕೊಡಲು ಸ್ವತಂತ್ರ ಭಾರತ ತಿರಸ್ಕರಿಸಬೇಕು. ಮೇಲೆ ತೋರಿಸಿದ ಈ ಅನ್ಯಾಯಗಳೆಲ್ಲ ಏತಕ್ಕೆ ? ಲೋಕದಲ್ಲಿ ಎಲ್ಲೂ ಇಲ್ಲದಷ್ಟು ದುಬಾರಿಯಾದ ಈ ಪರದೇಶೀಯ ಆಡಳಿತವನ್ನು ನಡೆಸಲಿಕ್ಕೆ. ನಿಮ್ಮ ಸಂಬಳವನ್ನೇ ನೋಡಿ. ತಿಂಗಳಿಗೆ ೨೧ ಸಾವಿರ ರೂಪಾಯಿ. ಇನ್ನೂ ಉಳಿದ ಚಿಲ್ಲರೆ ಬಾಬುಗಳು ಎಷ್ಟೋ ಇವೆ. ಬ್ರಿಟಿಷ್ ಪ್ರಧಾನಿಗೆ ವರುಷಕ್ಕೆ ೫ ಸಾವಿರ ಪೌಂಡು ಅಂದರೆ ತಿಂಗಳಿಗೆ ೫,೪೦೦ ರೂಪಾಯಿ. ನಿಮಗೋ ದಿನಕ್ಕೆ ೭೦೦ ರೂಪಾಯಿ ಹಿಂದುಸ್ಥಾನದ ಸರಾಸರಿ ಆದಾಯ ದಿನಕ್ಕೆ ಎರಡಾಣೆಯೂ ಇಲ್ಲ. ಇಂಗ್ಲಂಡಿನಲ್ಲಿ ಸರಾಸರಿ ಆದಾಯ ದಿನಕ್ಕೆ ೨ ರೂಪಾಯಿ. ಅಲ್ಲಿ ಆ ಪ್ರಧಾನಿಗೆ ದಿನಕ್ಕೆ ೧೮೦ ರೂಪಾಯಿ. ಅಲ್ಲಿನ ಸರಾಸರಿ ವರಮಾನಕ್ಕೆ ೯೦ ರಷ್ಟು ಮಾತ್ರ ಆತನ ವರಮಾನ. ನಿಮಗೆ ಹಿಂದುಸ್ಥಾನದ ಸರಾಸರಿಗೆ ೫ ಸಾವಿರದಷ್ಟು. ಈ ವಿಷಯವನ್ನು ಪರಿಶೀಲಿಸಿ ನೋಡಿ ಎಂದು ಮುಂಡಿಯೂರಿ ಬೇಡುತ್ತೇನೆ. ಈ ದುಃಖಮಯ ಸತ್ಯವನ್ನು ಮನಸ್ಸಿಗೆ ನಾಟಿಸಲಿಕ್ಕೆಂದು ನಿಮ್ಮ ಸ್ವಂತ ಉದಾಹರಣೆ ಕೊಟ್ಟೆ. ನಿಮ್ಮ ವಿಷಯದಲ್ಲಿ ನನಗೆ ತುಂಬಾಗೌರವವಿದೆ. ನಿಮ್ಮ ಮನಸ್ಸನ್ನು ನೋಯಿಸುವ ಬಯಕೆಗೆ ಅದು ಎಡೆಗೊಡದು. ನಿಮಗೆ ಬರುವ ಸಂಬಳ ನಿಮಗೆ ಅಗತ್ಯವಿಲ್ಲ' ಎಂಬುದನ್ನು ನಾ ಬಲ್ಲೆ. ನಿಮ್ಮ ಇಡೀ ಸಂಬಳವೇ ದಾನಧರ್ಮಕ್ಕೆ ಹೋಗುತ್ತಿದೆಯೋ ಏನೋ! ಆದರೂ ಇಂಥ ಏರ್ಪಾಡನ್ನು ಮಾಡಿದ ರಾಜ್ಯ ಆಡಳಿತ ನಿಶ್ಶೇಷವಾಗಿ ನಾಶವಾಗುವದು ಅತ್ಯಂತ ಅವಶ್ಯವಿದೆ. ವೈಸರಾಯರ ಸಂಬಳದ ಬಗ್ಗೆ ಹೇಳಿದ ಮಾತೇ ಇಡೀ ಆಡಳಿತದ ಸಂಬಳಗಳಿಗೂ ಅನ್ವಯಿಸುತ್ತದೆ.

ಆದ್ದರಿಂದ ವರಮಾನ ತಗ್ಗಿಸಬೇಕಾದರೆ ಆಡಳಿತದ ವೆಚ್ಚವನ್ನೂ ಅದರಂತೆ ತಗ್ಗಿಸಬೇಕು. ಇಡೀ ಸರಕಾರದ ಯೋಜನೆಯನ್ನೆ ಬದಲಿಸಬೇಕು. ಸ್ವಾತಂತ್ರ್ಯವಿಲ್ಲದೆ ಈ ಪರಿವರ್ತನೆ ಸಾಧ್ಯವಲ್ಲ. ಅಂತೇ ಸಾವಿರಾರು ಜನ ಹಳ್ಳಿಗರು ಸ್ವಯಂಸ್ಫೂರ್ತಿಯಿಂದ ಜನವರಿ ೨೬ ರ ಕಾರ್ಯಕ್ರಮದಲ್ಲಿ ಪಾಲು ಗೊಂಡದ್ದು. ಸ್ವಾತಂತ್ರ್ಯವೆಂದರೆ ಅವರಿಗೆ ಯಮಭಾರ ನಿವೃತ್ತಿ. ಹಿಂದು-ಸ್ಥಾನ ಇಷ್ಟು ಏಕಕಂಠದಿಂದ ವಿರೋಧಿಸಿದರೂ ಹಿಂದುಸ್ಥಾನದಿಂದ ಬ್ರಿಟನ್ ದಿನವೂ ಪಡೆಯುತ್ತಿರುವ ಲಾಭವನ್ನು ಬಿಡಲು ಬ್ರಿಟನ್ನಿನ ರಾಜಕೀಯ ಪಕ್ಷ ಒಂದಾದರೂ ಸಿದ್ಧವಾಗಿಲ್ಲವೆಂದು ನನಗೆ ತೋರುತ್ತಿದೆ.

ಆದರೂ, ಹಿಂದುಸ್ಥಾನವೂ ಒಂದು ರಾಷ್ಟ್ರವಾಗಿ ಬದುಕಬೇಕಾದರೆ, ಹಿಂದುಸ್ಥಾನದ ಜನ ಹೊಟ್ಟೆಗಿಲ್ಲದೆ ದಿನಾಲು ಮರಣಕ್ಕೆ ತುತ್ತಾಗುವದು ನಿಲ್ಲಬೇಕಾದರೆ, ಕೂಡಲೇ ಏನಾದರೊಂದು ಪರಿಹಾರೋಪಾಯ ಬೇಕು. ನೀವು ಏರ್ಪಡಿಸಲಿರುವ ಗೋಷ್ಠಿ ಕಂಡಿತವಾಗಿಯೂ ಪರಿಹಾರ ಸಾಧನವಲ್ಲ. ತರ್ಕಮಾಡಿ ತಿಳಿಸಬೇಕಾದ್ದು ಏನೂ ಇಲ್ಲ. ಪರಸ್ಪರ ಬಲಾಬಲಗಳ ವಿಷಯ ವಾಗಿದೆ ಇದು. ತರ್ಕಸಮ್ಮತವಾಗಲಿ ಆಗದಿರಲಿ, ತನ್ನ ಸಮಸ್ತ ಬಲವನ್ನೂ ಉಪಯೋಗಿಸಿ ಬ್ರಿಟನ್ ತನ್ನ ವ್ಯಾಪಾರ-ವಾಣಿಜ್ಯವನ್ನು ರಕ್ಷಿಸಿಕೊಂಡೀತು. ಇದರ ಪರಿಣಾಮವಾಗಿ, ಈ ಮೃತ್ಯುಜಾಲದಿಂದ ಮುಕ್ತವಾಗಲು ಸಾಕಾಗು ವಷ್ಟು ಬಲವನ್ನು ಹಿಂದುಸ್ಥಾನ ಬೆಳಸಿಕೊಳ್ಳಬೇಕು.

ಸದ್ಯ ಗಣನೀಯವಲ್ಲದಿದ್ದರೂ ಸುವ್ಯಸ್ಥಿತವಲ್ಲದಿದ್ದರೂ ಹಿಂಸಾ ವಾದಿಗಳ ಗುಂಪು ದಿನೇ ದಿನೇ ಬೆಳೆದು ಪ್ರಭಾವಶಾಲಿಯಾಗುತ್ತಿದೆ. ಅದರ ಗುರಿಯೂ ನನ್ನ ಗುರಿಯೂ ಒಂದೇ. ಆದರೆ ಆ ದಾರಿ ಮೂಕ ಜನಕೋಟಿಗೆ ಬೇಕಾದ ಮುಕ್ತಿಯನ್ನು ತಾರದೆಂದು ನನಗೆ ದೃಢವಾಗಿದೆ. ಜೊತೆಗೆ ಬ್ರಿಟಿಷ್ ಸರಕಾರದ ಅಚ್ಚುಕಟ್ಟಾದ ಹಿಂಸೆಗೆ ಶುದ್ಧ ಅಹಿಂಸೆಯೊಂದೇ ಪರಿಹಾರ ಎಂದು ನನ್ನ ಮನಸ್ಸಿಗೆ ಹೆಚ್ಚು ಹೆಚ್ಚು ನಾಟುತ್ತಿದೆ. ಅಹಿಂಸೆ ಕ್ರಿಯಾತ್ಮಕಶಕ್ತಿ ಯಲ್ಲವೆನ್ನುತ್ತಾರೆ ಎಷ್ಟೋಜನ. ನನ್ನ ಅಲ್ಪಾನುಭವದಲ್ಲೇ ಅಹಿಂಸೆ ಅತ್ಯಂತ ಕ್ರಿಯಾತ್ಮಕವೆಂಬುದನ್ನು ಮನಗಂಡಿದೇನೆ. ಬ್ರಿಟಿಷ್ ಸರಕಾರದ ವ್ಯವಸ್ಥಿತ ಹಿಂಸಾಕ್ರಮಕ್ಕೂ ಹಿಂಸಾವಾದಿಗಳ ಅವ್ಯವಸ್ಥಿತ ಹಿಂಸಾಕೃತಿಗೂ ವಿರುದ್ಧವಾಗಿ ಅಹಿಂಸಾ ಶಕ್ತಿಯನ್ನು ವಿಜೃಂಭಣಗೊಳಿಸುವುದು ನನ್ನ ಉದ್ದೇಶ. ಅಕರ್ಮಿ

ಯಾಗಿ ಸುಮ್ಮನೆ ಕೂತರೆ ಈ ಉಭಯ ಹಿಂಸಾಪಂಥಗಳಿಗೂ ಔತಣ ಕೊಟ್ಟಂತಾದೀತು. ಅಹಿಂಸೆಯ ಪ್ರಭಾವದಲ್ಲಿ ನಿಸ್ಸಂಶಯವಾದ ಅವಿಚಲವಾದ ವಿಶ್ವಾಸವಿದ್ದೂ ಇನ್ನು ಸುಮ್ಮನಿದ್ದರೆ ನನಗದು ಪಾಪವಾದೀತು. ಈ ಅಹಿಂಸೆಗೆ ಸವಿನಯ ಶಾಸನೋಲ್ಲಂಘನವೇ ರೂಪು. ಸದ್ಯ ಸತ್ಯಾಗ್ರಹಾಶ್ರಮದ ನಿವಾಸಿಗಳು ಮಾತ್ರ ಶಾಸನೋಲ್ಲಂಘನ ಮಾಡಿಯಾರು. ಕ್ರಮೇಣ, ಈ ಚಳುವಳಿಯ ವಿಧಿನಿಷೇಧಗಳನ್ನು ಅರಿತುಕೊಂಡು ಅದಕ್ಕೆ ಸೇರಬಯಸಿದವರೆಲ್ಲರಿಗೂ ಅವರಲ್ಲಿ ಇಂಬು ಇದ್ದೀತು.

ಅಹಿಂಸಾಪಥದಲ್ಲಿ ಘೋರೋಪಾಯ ಕಾದಿವೆಯೆಂದೂ ಈ ಅಪಾಯಕ್ಕೆ ತಲೆ ಒಡ್ಡುವುದು ಹುಚ್ಚತನವೆಂದೂ ಬಲ್ಲೆ. ಘೋರಾತಿಘೋರ ಅಪಾಯಗಳನ್ನು ಇದಿರಿಸದೆಯೆ ಸತ್ಯದ ವಿಜಯ ಪರಂಪರೆ ಎಂದಾದರೂ ಪ್ರಾಪ್ತವಾಗಿದೆಯೆ? ತನಗಿಂತ ಸಂಖ್ಯಾಧಿಕವಾದ ಪುರಾತನವಾದ, ತನಗಿಂತ ಸಂಸ್ಕೃತಿಯಲ್ಲಿ ಕಡಿಮೆ ಇಲ್ಲದ ಜನಾಂಗವನ್ನು ತಿಳಿದೋ ತಿಳಿಯದೆಯೋ ಸುಲಿಯುತ್ತಿರುವ ಜನಾಂಗವನ್ನು ಪರಿವರ್ತನಗೊಳಿಸುವುದು ಅಲ್ಪಕಾರ್ಯವೆ? ಎಷ್ಟು ಅಪಾಯಬಂದರೂ ನಿರ್ವಹಿಸಬೇಕಾದ ಕೆಲಸ ಅದು.

ಬೇಕೆಂದೇ ನಾನು ಪರಿವರ್ತನ ಎಂದು ಪದವನ್ನು ಬಳಸಿದೇನೆ. ಬ್ರಿಟಿಷ್ ಜನರನ್ನು ಅಹಿಂಸೆಯಿಂದ ಪರಿವರ್ತನೆಗೊಳಿಸಿ, ಅವರು ಹಿಂದುಸ್ಥಾನಕ್ಕೆ ಮಾಡಿರುವ ಅನ್ಯಾಯವನ್ನು ಅರಿತುಕೊಳ್ಳುವಂತೆ ಮಾಡುವ ಆಸೆ ನನ್ನದು; ಅಲ್ಪವಾದ್ದಲ್ಲ ಅದು. ನಿಮ್ಮ ಜನಕ್ಕೆ ಹಾನಿಮಾಡುವ ಉದ್ದೇಶವಿಲ್ಲ ನನಗೆ. ನನ್ನವರ ಸೇವೆಮಾಡುವಂತೆ ಅವರ ಸೇವೆಯನ್ನೂ ಮಾಡಿಯೇನು. ಯಾವಾಗಲೂ ಸೇವೆ ಮಾಡಿದೇನೆಂದೇ ನನ್ನ ನಂಬಿಕೆ. ೧೯೧೯ ರ ವರೆಗೆ ಕಣ್ಣುಮುಚ್ಚಿ ಅವರ ಸೇವೆ ಮಾಡಿದೆ. ಆದರೆ ನನ್ನ ಕಣ್ಣು ತೆರೆದು ನಾನು ಅಸಹಕಾರ ಹೂಡಿದಾಗಲೂ ಅವರ ಸೇವೆಯೇ ಅದರ ಉದ್ದೇಶ. ನನ್ನ ಕುಟುಂಬದವರ ಮೇಲೆ, ಪ್ರೀತಿಪಾತ್ರರ ಮೇಲೆ ಉಪಯೋಗಿಸಿದ ಆಯುಧವನ್ನೇ ಅವರ ಮೇಲೂ ಉಪಯೋಗಿಸಿದೆ. ನನ್ನವರ ಮೇಲಿದ್ದಷ್ಟೇ ಪ್ರೀತಿ ನಿಮ್ಮವರ ಮೇಲೂ ನನಗಿದ್ದರೆ ಎಷ್ಟುದಿನ ಅದು ಅಡಗಿದ್ದೀತು? ನನ್ನ ಕುಟುಂಬದ ಜನ ಹಲವು ವರ್ಷಕಾಲ ನನ್ನನ್ನು ಪರೀಕ್ಷಿಸಿ ತರುವಾಯ ನನ್ನ ಪ್ರೀತಿಯನ್ನು ಒಪ್ಪಿದಂತೆಯೇ ಅವರೂ ಒಪ್ಪಿಕೊಂಡಾರು. ಜನ ನನ್ನ ದಾರಿ

ತುಳಿದಾರೆಂದು ನಿರೀಕ್ಷೆಯಿದೆ ನನಗೆ. ಹಾಗೆ ಅವರು ತುಳಿದರೆ ಅವರು ಅನುಭವಿಸುವ ಸಂಕಟ ಕಲ್ಲೆದೆಗಳನ್ನೂ ಕರಗಿಸೀತು. ಬ್ರಿಟಿಷ್ ಜನ ಅದಕ್ಕೆ ಮೊದಲೇ ಪರಾವರ್ತನಗೊಂಡರೆ ಆ ಮಾತು ಬೇರೆ.

ಶಾಸನೋಲ್ಲಂಘನದ ಮೂಲಕ, ನಾನು ಮೇಲೆ ತೋರಿಸಿದಂಥ ಕೆಡುಕುಗಳನ್ನು ನಿರೋಧಿಸುವುದೇ ಯೋಜನೆ. ಬ್ರಿಟಿಷರ ಸಂಬಂಧ ನಮಗೆ ಬೇಡ ಎಂಬುದು ಇಂಥ ಅನ್ಯಾಯಗಳಿಂದ. ಇವು ತೊಲಗಿದರೆ ದಾರಿ ಸರಾಗವಾದೀತು. ಆಗ ಗೆಳೆಯರಂತೆ ಸಂಧಾನಮಾಡಲು ಸಾಧ್ಯ. ಬ್ರಿಟಿಷರು ಹಿಂದುಸ್ಥಾನದೊಡನೆ ಮಾಡುವ ವ್ಯಾಪಾರದಲ್ಲಿ ದುರಾಸೆ ಬಿಟ್ಟರೆ ನಮ್ಮ ಸ್ವಾತಂತ್ರ್ಯವನ್ನೊಪ್ಪಲು ಕಷ್ಟವಾಗದು. ಆದ್ದರಿಂದ ಈ ಅನ್ಯಾಯಗಳನ್ನು ಕೂಡಲೆ ನಿರ್ಮೂಲಮಾಡಿ, ಇಬ್ಬರ ನಡುವೆ ಸರಿಸಮಭಾವದಿಂದ ಸಂಧಾನ ನಡೆಯಲು ಅವಕಾಶವನ್ನೇರ್ಪಡಿಸಿ, ಆತ್ಮಸಂತೋಷದಿಂದ ಜೊತೆಗೂಡಿ ಜಗದ್ಧಿತವನ್ನು ಬೆಳೆಸಲಿಕ್ಕೂ ಪರಸ್ಪರ ಸಹಾಯ ವಾಣಿಜ್ಯಗಳಿಗೆ ದಾರಿಮಾಡಲು ಪ್ರಯತ್ನ ಮಾಡಿ ಎಂದು ನಿಮ್ಮನ್ನು ಬೇಡುತ್ತೇನೆ. ಈ ದೇಶವನ್ನು ಬಾಧಿಸುತ್ತಿರುವ ಕೋಮುವಾರು ಕಲಹಗಳನ್ನು ನೀವು ಅನಗತ್ಯವಾಗಿ ಒತ್ತಿ ಹೇಳಿದೀರಿ. ರಾಜ್ಯಾಂಗ ರಚನೆಯಲ್ಲಿ ಅವು ಮುಖ್ಯವೇ ಇದ್ದಾವು. ಎಲ್ಲ ಕೋಮುಗಳನ್ನು ಅಷ್ಟೇ ಮಟ್ಟಿಗೆ ಬಾಧಿಸುತ್ತಿರುವ ಅಧಿಕತರ ಸಮಸ್ಯೆಗಳಲ್ಲಿ ಇವಕ್ಕೆ ಸ್ಥಳವೇ ಇಲ್ಲ. ಈ ಅನ್ಯಾಯಗಳನ್ನು ನಿರ್ಮೂಲ ಮಾಡಲು ನಿಮಗೆ ದಾರಿ ಇಲ್ಲವಾದರೆ ನನ್ನ ಈ ಕಾಗದ ನಿಮ್ಮ ಮನಸ್ಸಿಗೆ ರುಚಿಸದಿದ್ದರೆ, ಈ ತಿಂಗಳು ೧೧ನೇ ದಿನ ಸಾಧ್ಯವಿದ್ದಷ್ಟು ಜನ ಆಶ್ರಮವಾಸಿಗಳನ್ನು ಕರೆದುಕೊಂಡು ಲವಣ ಶಾಸನವನ್ನು ಉಲ್ಲಂಘಿಸಲು ಹೊರಡುತ್ತೇನೆ. ಬಡವನ ಕಣ್ಣಿಂದ ನೋಡಿದರೆ ಎಲ್ಲಕ್ಕಿಂತ ಈ ತೆರಿಗೆಯೆ ಅನ್ಯಾಯವಾದುದು. ಈ ಸ್ವಾತಂತ್ರ್ಯದ ಚಳುವಳಿ ಎಲ್ಲವೂ ದೇಶದ ದೀನಾತಿದೀನರಿಗಾಗಿ; ಆದ್ದರಿಂದ ಈ ಅನ್ಯಾಯವಿರೋಧದಿಂದ ಮೊದಲು ಮಾಡುತ್ತೇವೆ. ಇಷ್ಟುದಿನ ಈ ಕ್ರೌರ್ಯವನ್ನು ಸಹಿಸಿದ್ದೇ ನಿಜವಾಗಿ ಅಚ್ಚರಿ. ನನ್ನನ್ನು ಬಂಧಿಸಿ ನನ್ನ ಯೋಜನೆಯನ್ನು ಭಗ್ನಗೊಳಿಸುವುದು ನಿಮಗೆ ಸಾಧ್ಯ, ನಾ ಬಲ್ಲೆ. ನಾನು ಹೋದರೆ ನನ್ನ ತರುವಾಯ ಸಾವಿರಾರು ಜನ ಸಕ್ರಮವಾಗಿ ಶಿಷ್ಟಪೂರ್ಣವಾಗಿ ಈ ಕಾರ್ಯವನ್ನು ಕೈಗೊಂಡಾರೆಂದೂ, ಶಾಸನದ ಹೆಸರಿಗೇ ಅವಮಾನ ತಂದಿರುವ ಲವಣ ಶಾಸನಭಂಗದ ಶಿಕ್ಷೆಗಳಿಗೆಲ್ಲ ಸಿದ್ಧವಾದಾರೆಂದೂ ನಂಬಿದೇನೆ.

ನಿಮಗೆ ಅನವಶ್ಯಕವಾಗಿ ಇಕ್ಕಟ್ಟನ್ನು ತರುವ ಉದ್ದೇಶ ನನಗಿಲ್ಲ. ನನ್ನ ಪತ್ರದಲ್ಲಿ ಸ್ವಲ್ಪವಾದರೂ ತಥ್ಯವಿದೆ ಎಂದು ನಿಮಗನಿಸಿದರೆ, ನನ್ನೊಡನೆ ಏನಾದರೂ ಚರ್ಚಿಸಬಯಸಿದರೆ, ಅದಕ್ಕಾಗಿ ಈ ಪತ್ರದ ಪ್ರಕಟನೆಯನ್ನು ನಿಲ್ಲಿಸಬೇಕೆಂದರೆ, ಹಾಗೆ ಒಂದು ತಂತಿಕೊಡಿ; ನಿಲ್ಲಿಸಿಬಿಡುತ್ತೇನೆ. ಈ ಪತ್ರದ ಆಶಯವನ್ನು ಈಡೇರಿಸುವ ಇಷ್ಟವಿಲ್ಲದಿದ್ದರೆ ವೃಥಾ ನನ್ನನ್ನು ದಾರಿಗೆಡಿಸದೆ ಇರುವ ಅನುಗ್ರಹಮಾಡಿ.

ಈ ಪತ್ರ ಬೆದರಿಸಲು ಬರೆದುದಲ್ಲ. ಶಾಸನಭಂಗ ಮಾಡುವವನಿಗೆ ಇದು ವಿಧಿ, ಧರ್ಮ. ಅಂತೇ ಇದನ್ನು ಭಾರತೀಯ ಆಂದೋಳನದಲ್ಲಿ ವಿಶ್ವಾಸವುಳ್ಳವನೂ ಅಹಿಂಸೆಯಲ್ಲಿ ಶ್ರದ್ಧೆಯುಳ್ಳವನೂ ಆದ ಇಂಗ್ಲೀಷು ತರುಣನೊಬ್ಬನ ಕೈಯಲ್ಲಿ ಕೊಟ್ಟು ಕಳಿಸಿದೇನೆ. ಈ ಕೆಲಸಕ್ಕಾಗಿಯೇ ದೇವರು ಆತನನ್ನು ನನ್ನ ಬಳಿಗೆ ಕಳಿಸಿದನೋ ಏನೋ ಎಂದು ನನಗೆ ತೋರುತ್ತಿದೆ.

ನಿಮ್ಮ ನೆಚ್ಚಿನ ಗೆಳೆಯ

ಮೋ. ಕ. ಗಾಂಧಿ

# ಪ್ರತಿಯೊಬ್ಬ ಬ್ರಿಟನ್ನನಿಗೆ

ದಕ್ಷಿಣ ಆಫ್ರಿಕದಲ್ಲಿ ನನ್ನ ಸಾರ್ವಜನಿಕ ಜೀವನವನ್ನು ಪ್ರಾರಂಭಿಸಿದ ತರುಣದಲ್ಲಿ 'ದಕ್ಷಿಣ ಆಫ್ರಿಕದ ಪ್ರತಿಯೊಬ್ಬ ಬ್ರಿಟನ್‌ನಿಗೆ—ಬಹಿರಂಗ ಪತ್ರ' ಬರೆದೆ. ಅದರ ಪರಿಣಾಮವಾಯಿತು. ಜಗತ್ತಿನ ಇತಿಹಾಸ ವಿಷಮ ಘಟ್ಟಕ್ಕೆ ಬಂದು ನಿಂತಿರುವ ಈ ಸಮಯದಲ್ಲಿ ಮತ್ತೊಮ್ಮೆ ಆ ಮೇಲ್ಪಂಕ್ತಿ ತೀಡಬೇಕೆನಿಸುತ್ತದೆ. ಈ ಸಲ ಲೋಕದಲ್ಲಿರುವ ಎಲ್ಲ ಬ್ರಿಟನ್‌ರಿಗೂ ತನ್ನ ರಾಷ್ಟ್ರದ ಮಂತ್ರಾಲೋಚನೆಯಲ್ಲಿ ಅವನು ಶೂನ್ಯನೇ ಆಗಿದ್ದಾನು. ಆದರೆ ಅಹಿಂಸಾ ರಾಜ್ಯದಲ್ಲಿ ಸತ್ಯವಿಚಾರ ಒಂದೊಂದಕ್ಕೂ ಬೆಲೆಯುಂಟು; ಸತ್ಯ ವಾಕ್ಕು ಪ್ರತಿಯೊಂದಕ್ಕೂ ಪೂರ್ಣ ಪ್ರಭಾವವುಂಟು, 'ಜನವಾಣಿಯೇ ದೇವ ವಾಣಿ' ಎಂಬುದು ಬರೀ ಶಾಸ್ತ್ರವಲ್ಲ. ಮಾನವ ಜಾತಿಯ ದೃಢಾನುಭವದ ನುಡಿ ಅದು, ಅದಕ್ಕೆ ಒಂದು ನಿಯಮವಿದೆ: ಕೇವಲ ಅಹಿಂಸಾ ರಾಜ್ಯದಲ್ಲಿ ಮಾತ್ರ ಅದು ಸತ್ಯ. ಹಿಂಸೆ ಜನವಾಣಿಯನ್ನು ಹಲವು ಕಾಲ ತುಳಿದಿಟ್ಟೀತು, ಭಗ್ನಗೊಳಿಸೀತು. ಆದರೆ ನನ್ನ ಕ್ಷೇತ್ರ ಅಹಿಂಸಾ ಕ್ಷೇತ್ರ. ಅಂತೇ ಸತ್ಯ ವಿಚಾರ, ಪ್ರಕಟವಿರಲಿ ಅಪ್ರಕಟವಿರಲಿ, ನನಗೆ ಮುಖ್ಯ.

ಈ ಗಳಿಗೆಯೇ ಏಷ್ಯಾದಿಂದ, ಆಫ್ರಿಕಾದಿಂದ, ಕನಿಷ್ಠಪಕ್ಷ ಹಿಂದುಸ್ಥಾನ ದಿಂದಲಾದರೂ ಮರಳಿ ಹೋಗಿ ಎಂದು ನಾನು ಬ್ರಿಟಿಷರನ್ನು ಬೇಡು ತ್ತಿದೇನೆ. ಪ್ರತಿಯೊಬ್ಬ ಬ್ರಿಟನ್ನನೂ ನನ್ನೀ ಬಿನ್ನಹಕ್ಕೆ ಬೆಂಬಲಕೊಡಲಿ ಎಂದು ಬೇಡುತ್ತೇನೆ. ಲೋಕದ ಕ್ಷೇಮಕ್ಕಾಗಿ, ನಾಜಿ ಫ್ಯಾಸಿಸ್ಟ್ ತತ್ವಗಳ ಸಂಹಾರಕ್ಕಾಗಿ ಈ ಹೆಜ್ಜೆ ಇಡುವುದು ಅತ್ಯಗತ್ಯ. ಇದರಲ್ಲಿ ಜಪಾನೀ ತತ್ವವೂ ಸೇರಿದೆ. ಅದು ಆ ಎರಡರ ಒಳ್ಳೇ ನಕಲು. ನನ್ನ ಬಿನ್ನಹಕ್ಕೆ ಒಪ್ಪಿದರೆ ಎಲ್ಲ ವೈರಿ ರಾಜ್ಯಗಳ ಯುದ್ಧವ್ಯೂಹವೂ ಭಗ್ನವಾದೀತು. ಬ್ರಿಟನ್ನಿನ ರಣಪಂಡಿತರ ಮಂತ್ರಾಲೋಚನೆಯೂ ಸ್ತಂಭಿತವಾದೀತು.

ನನ್ನ ಬಿನ್ನಹ ಮನಸ್ಸಿಗೆ ನಾಟಿದರೆ, ದಿನ ದಿನಕ್ಕೆ ಗುಡ್ಡದಂತೆ ಬೆಳೆಯುತ್ತಿರುವ ಈ ಯುದ್ಧದ ವೆಚ್ಚದ ಮುಂದೆ, ಬ್ರಿಟಿಷರಿಗೆ ಹಿಂದುಸ್ಥಾನದಲ್ಲಿ ಆಫ್ರಿಕಾದಲ್ಲಿ ಇರುವ ಸೊತ್ತಿನ ಪರಿತ್ಯಾಗದ ನಷ್ಟ ಒಂದು ಕುರುಡು ಕಾಸೂ ಅಲ್ಲವೆಂಬುದು ತಿಳಿದೀತು. ಲಾಭ ನಷ್ಟಗಳ ತೂಕದಲ್ಲಿ ನೀತಿಯನ್ನು ಹಾಕಿದೆವೋ, ಬ್ರಿಟನ್ನಿಗೆ–ಭಾರತಕ್ಕೆ–ಲೋಕಕ್ಕೆ ಲಾಭವೇ ವಿನಾ ನಷ್ಟವಲ್ಲ.

ಏಷ್ಯಾ ಆಫ್ರಿಕಗಳಿಂದ ಮರಳಿ ಹೋಗಿ ಎಂದರೂ ಸದ್ಯ ಹಿಂದುಸ್ಥಾನ ಬಿಟ್ಟು ಹೊರಡಲಿ, ಸಾಕು. ಬ್ರಿಟಿಷ ರಾಜಕೀಯ ಪಟುಗಳು ಹಿಂದುಸ್ಥಾನ ಯುದ್ಧದಲ್ಲಿ ಭಾಗವಹಿಸಿದೆ ಎನ್ನುತ್ತಾರೆ. ಯುದ್ಧವನ್ನು ಪ್ರಾರಂಭಿಸುವಾಗ ಹಿಂದುಸ್ಥಾನವನ್ನು ಶಾಸ್ತ್ರಕ್ಕೆ ಕೂಡ ಕೇಳಲಿಲ್ಲ. ಯಾಕೆ ಕೇಳಬೇಕು ? ಭಾರತ ಭಾರತೀಯರದಲ್ಲ, ಬ್ರಿಟಿಷರದು. ಬ್ರಿಟಿಷರ ಸೊತ್ತು ಎಂದಿಲ್ಲವೆ ಅದನ್ನು ? ಬ್ರಿಟಿಷರು ತಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು ಅದರ ವಿಷಯದಲ್ಲಿ. ಯುದ್ಧ ವಿರೋಧಿಯಾದ ನನ್ನಿಂದಲೇ ಹಲವು ಬಗೆಯಲ್ಲಿ ಯುದ್ಧಗಂದಾಯವನ್ನು ತೆಗೆದುಕೊಳ್ಳುತ್ತಾರೆ. ನಾನು ಅಂಚೆಗೆ ಹಾಕಿದ ಪ್ರತಿಯೊಂದಕ್ಕೂ ಪತ್ರ ಅರ್ಧಾಣೆ, ಕಾರ್ಡಿಗೆ ಕಾಲಾಣೆ, ತಂತಿಗೆ ಎರಡಾಣೆ ಯುದ್ಧಗಂದಾಯ ತೆಗೆದುಕೊಳ್ಳುತ್ತಾರೆ. ಆ ಘೋರ ಚಿತ್ರದ ತೀರ ತಿಳುವಾದ ಬಣ್ಣ ಇದು. ಇದರಲ್ಲಿ ಬ್ರಿಟಿಷರ ಬೆಳಕು ತಿಳಿಯುತ್ತದೆ. ನಾನೇ ಅರ್ಥಶಾಸ್ತ್ರ ವಿದ್ಯಾರ್ಥಿಯಾಗಿದ್ದರೆ ಹಿಂದುಸ್ಥಾನದಿಂದ ಯುದ್ಧಕ್ಕಾಗಿ ಆತ್ಮ ಸಂತೋಷದಿಂದ ಕೊಟ್ಟ ಯುದ್ಧನಿಧಿಯ ಕಾಣಿಕೆಯೆಂಬ ಸುಳ್ಳು ಹೆಸರಿನ ಸುಲಿಗೆಯ ಜೊತೆಗೆ, ಇನ್ನೂ ಎಷ್ಟು ಹಣ ಸೆಳೆಯುತ್ತಿದ್ದಾರೆಂಬುದನ್ನು ಪರ್ವತೋನ್ನತವಾದ ಅಂಕಿಗಳನ್ನು ಅರಿಸಿಕೊಡುತ್ತಿದ್ದೆ—ಬೆಚ್ಚಿ ಬೀಳುವಂತೆ. ಗೆದ್ದವರಿಗೆ ಸೋತವರು ಕೊಟ್ಟ ಯಾವ ಕಪ್ಪವೂ ಆತ್ಮಸಂತೋಷದ್ದಲ್ಲ. ಬ್ರಿಟನ್ನಾದರೂ ಎಂಥ ವಿಜೇತ ! ಸೊಗಸಾಗಿ ಭದ್ರವಾಗಿ ಸವಾರಿ ಮಾಡುತ್ತಿದ್ದಾನೆ. ಅವನು ಉಸಿರಿದರೆ ಸಾಕು. ಜೀಯಾ ಎಂದು ಅದನ್ನು ನಡಸಲು ಸಿದ್ಧ ಹಿಂದುಸ್ಥಾನದಲ್ಲಿ, ಇದು ಅತಿಶಯೋಕ್ತಿಯಲ್ಲ. ಹಿಂದುಸ್ಥಾನವನ್ನು ಬ್ರಿಟನ್ ಗೆದ್ದಿದೆ. ತನ್ನ ಸೇನೆಯನ್ನು ತಳವೂರಿಸಿ ಆಳುತ್ತಿದೆ. ಎಂದರೆ ಬ್ರಿಟನ್ನಿಗೂ ಹಿಂದುಸ್ಥಾನಕ್ಕೂ ಸದಾಕಾಲವೂ ಯುದ್ಧವೇ ಎಂದ ಹಾಗೆ. ಬ್ರಿಟನ್ನಿನ ಈ ಯುದ್ಧದಲ್ಲಿ ಬಲಾತ್ಕಾರವಾಗಿ ಹಿಂದುಸ್ಥಾನವನ್ನೂ ನೂಕಿದರೆ

ಅದಕ್ಕೇನು ಲಾಭ ? ಭಾರತೀಯ ಸೈನಿಕರ ಬೀರತನದಿಂದ ಭಾರತಕ್ಕೇನೂ ಲಾಭವಿಲ್ಲ.

ಜಪಾನೀ ಬಾಧೆ ಯಾವಾಗ ಬರಲಿದೆಯೋ ಏನೋ; ಈಗಲೇ ಬ್ರಿಟಿಷ ಸೇನೆ–ಭಾರತೀಯರೂ ಇತರರೂ–ಭಾರತೀಯ ಗ್ರಾಮಗಳನ್ನೂ ಗೃಹಗಳನ್ನೂ ಆಕ್ರಮಿಸಿದೆ ಅಲ್ಲಿ ವಾಸವಾಗಿದ್ದವರನ್ನು ನಿರ್ದಾಕ್ಷಿಣ್ಯವಾಗಿ ಹೊರಗೋಡಿಸಿದಾರೆ ಹೇಳದೆ ಕೇಳದೆ. ಅವರ ಪಾಡು ಏನಾದರೂ ಆಗಲಿ. ಮನೆ ಬಿಡಲಿಕ್ಕೆ ಅವರಿಗೆ ಕೊಡುವ ಮೂರು ಕಾಸು ಯಾವುದಕ್ಕೂ ಸಾಲದು. ಅವರ ಕಸಬು ನಾಶ. ಹೊಟ್ಟೆಗಾಗಿ ಹುಡುಕಬೇಕು, ಗುಡಿಸಲು ಕಟ್ಟಬೇಕು. ಇವರು ದೇಶಾಭಿಮಾನಕ್ಕಾಗಿ ಮನೆ ಬಿಡರು. ಇಂಥ ಪ್ರಸಂಗವನ್ನು ನನಗೆ ತಿಳಿಸಿದಾಗ, ಈ ಮನೆ ಮುರುಕು ಜನ ತಮ್ಮ ಭವಣೆಯನ್ನು ಆದದ್ದಾಗಲಿ ಎಂದು ಭವಿಸಬೇಕೆಂದು ಬರೆದೆ. ನನ್ನ ಸಂಗಾತಿಗಳು ಅದನ್ನು ವಿರೋಧಿಸಿ, ನೀವೇ ಆ ಗೃಹ ವಿಹೀನರಬಳಿ ಹೋಗಿ, ಅವರನ್ನು ಸಮಾಧಾನಮಾಡಿ, ಇನ್ನಾರನ್ನಾದರೂ ಕಳಿಸಿ ಈ ಅಸಾಧ್ಯ ಕೆಲಸಕ್ಕೆ ಎಂದರು. ಅವರ ಮಾತು ಸರಿ. ಈ ಬಡವರನ್ನು ಹಾಗೆ ನಡಸಿಕೊಳ್ಳಬಾರದಾಗಿತ್ತು. ಊರು ಬಿಡಿ, ಮನೆ ಬಿಡಿ ಎಂದಾಗ ಅವರಿಗೆ ಬೇರೆ ವಸತಿ ಮಾಡಿಕೊಡಬೇಕಿತ್ತು.

ಪೂರ್ವ ಬಂಗಾಳದ ಜನ ಉಭಯಲೋಕ ವಾಸಿಗಳು: ನೆಲದ ಮೇಲೂ ನದಿಯ ನೀರ ಮೇಲೂ ಎರಡರಲ್ಲೂ ಬದುಕುವ ಜನ. ಇಲ್ಲಿಂದಲ್ಲಿ ಅಲ್ಲಿಂದಿಲ್ಲಿ ಓಡಾಡಲು ಅವರಿಗೆ ಹಗುರಾದ ಡೋಣಿಗಳಿವೆ. ಜಪಾನಿಗಳು ಈ ಹರಿಗೋಲನ್ನು ಉಪಯೋಗಿಸಿಕೊಂಡಾರಲ್ಲ ಎಂಬ ಹೆದರಿಕೆಗೆ ಅವನ್ನೆಲ್ಲ ಕಸಿದುಕೊಂಡಿದಾರೆ. ಬಂಗಾಳೀಗೆ ಹರಿಗೋಲು ಕೊಡುವುದೆಂದರೆ ಪ್ರಾಣವನ್ನೇ ಕೊಟ್ಟ ಹಾಗೆ. ತನ್ನ ಹರಿಗೋಲನ್ನು ಒಯ್ದವರು ಅವನ ಪಾಲಿಗೆ ಹಗೆಗಳು.

ಬ್ರಿಟನ್ ಯುದ್ಧದಲ್ಲಿ ಗೆಲ್ಲಬೇಕು. ನಿಜ. ಅದಕ್ಕಾಗಿ ಹಿಂದುಸ್ಥಾನವನ್ನು ಬಲಿ ಹಾಕಬೇಕೆ ? ಇದು ಸರಿಯೇ ?

ಇಷ್ಟೇ ಅಲ್ಲ. ಈ ದುಃಖಕಥನಕ್ಕೆ ಇನ್ನೂ ಅಂತ್ಯಭಾಗವಿದೆ. ಭಾರತೀಯ ಜೀವನವನ್ನು ಕವಿದಿರುವ ಅಸತ್ಯ, ಮಿಥ್ಯ, ಉಸಿರುಗಟ್ಟಿಸುತ್ತಿದೆ ಯಾರನ್ನೇ ನೋಡಲಿ, ಭಾರತೀಯ ಎಂಬವನಿಗೆಲ್ಲ ಏನೋ ಅಶಾಂತಿ.

ಹೊರಗೆ ಹೇಳಲಿಕ್ಕಿಲ್ಲ; ಒಳಗೇನೋ ಇದೆ. ಸರಕಾರೀ ನೌಕರರೂ ಮೇಲಿನವರೂ, ಕೆಳಗಿನವರೂ, ಇದಕ್ಕೆ ಅಪವಾದವಲ್ಲ. ಇದು ಬರೀ ಕರ್ಣಾಕರ್ಣಿಯಲ್ಲ. ಬ್ರಿಟಿಷ್ ಅಧಿಕಾರಿಗಳಿಗೂ ಇದು ಗೊತ್ತಿದೆ. ಆದರೆ ಇಂಥವರಿಂದಲೂ ದುಡಿಸಿಕೊಳ್ಳುವ ಚಾಕಚಕ್ಯ ಹೆರವರಿಗೆ ಇದೆ. ಈ ಸರ್ವವ್ಯಾಪಕವಾದ ಅವಿಶ್ವಾಸ ಅಸತ್ಯಗಳಿಂದ ಬಾಳೇ ಬೇಸರವಾಗಿದೆ. ಅದನ್ನು ಪ್ರಾಣಪಣವೊಡ್ಡಿ ವಿರೋಧಿಸದೆ ಬದುಕು ವ್ಯರ್ಥವಾಗಿದೆ.

ನಾ ಹೇಳಿದ್ದನ್ನು ನೀವು ನಂಬಲಿಕ್ಕಿಲ್ಲ. ಇದನ್ನು ತಪ್ಪು ಎಂದಾರು. ಖಂಡಿತವಾಗಿಯೂ ಎಲ್ಲ ಖಂಡನೆಯನ್ನೂ ನುಂಗಿ ನಿಂತೇನು.

ಸತ್ಯವೆಂದು, ಪೂರ್ಣ ಸತ್ಯವೆಂದು ನಂಬಿದ್ದನ್ನೇ ನಾನು ಹೇಳಿದೇನೆ.

ಈ ವಿಚಾರಮಂಥನವನ್ನು ನಮ್ಮ ಜನ ಒಪ್ಪಿಯಾರೋ ಇಲ್ಲವೋ. ನಾನು ಯಾರನ್ನೂ ಕೇಳಿಲ್ಲ. ಮೌನದಿನ ಇದನ್ನು ಬರೆಯುತ್ತಿದೇನೆ. ಬ್ರಿಟನ್ನಿನ ಕೃತಿಯನ್ನು ನಾನೀಗ ಯೋಚಿಸುತ್ತಿದೇನೆ. ಅಮೇರಿಕದಲ್ಲಿ ದಾಸ್ಯ ಪದ್ಧತಿಯನ್ನು ಅಳಿಸಿದಾಗ ಎಷ್ಟೋ ಜನ ಗುಲಾಮರೇ ವಿರೋಧಿಸಿದರಂತೆ; ಕೆಲವರು ಅತ್ತರಂತೆ. ಈ ವಿರೋಧ, ರೋದನಗಳನ್ನು ಲೆಕ್ಕಿಸದೆ ದಾಸ್ಯ ತೊಲಗಿ ಹೋಯಿತು, ಶಾಸನದ ಮೂಲಕ. ಆದರೆ ದಕ್ಷಿಣದವರಿಗೂ ಉತ್ತರದವರಿಗೂ ಕದನ ನಡೆದು ರಕ್ತಪಾತವಾದ ಮೇಲೆ ಬಂತು, ಈ ದಾಸ್ಯ ವಿಮುಕ್ತಿ. ಅಂತೇ ನಿಗ್ರೋ ಮೊದಲಿಗಿಂತ ಮೇಲಾದ ಸ್ಥಿತಿಗೆ ಏರಿದರೂ ಇನ್ನೂ ಉನ್ನತ ಸಮಾಜಕ್ಕೆ ಅಸ್ಪೃಶ್ಯನಾಗೇ ಇದಾನೆ. ಇದಕ್ಕಿಂತ ಉನ್ನತವಾದ್ದನ್ನು ನಾನು ಬೇಡುತ್ತೇನೆ. ಈ ಅಸ್ವಾಭಾವಿಕ ಅಧಿಕಾರವನ್ನು ರಕ್ತಪಾತವಿಲ್ಲದೆ ಕೊನೆಗಾಣಿಸೋಣ, ಹೊಸ ಯುಗವನ್ನು ಆರಂಭಿಸೋಣ ಎಂದು ಬೇಡುತ್ತೇನೆ. ನಮ್ಮಲ್ಲೇ ಕೆಲವರು ವಿರೋಧಿಸಿಯಾರು, ರೋದಿಸಿಯಾರು; ಆದರೂ ಚಿಂತೆಯಿಲ್ಲ.

ಬೊಂಬಾಯಿ
೧೧—೫—೪೨ ಮೋ. ಕ. ಗಾಂಧಿ

———

# ಪ್ರತಿಯೊಬ್ಬ ಜಪಾನೀಗೆ

ನಿಮ್ಮ ಮೇಲೆ ನನಗಾವ ಅಸಮಾಧಾನವಿರದಿದ್ದರೂ ನೀವು ನಡೆಸಿರುವ ಚೀಣಾ ಸಂಗ್ರಾಮ ನೋಡಿ ನನಗೆ ಬಹಳ ಅಸಹ್ಯವಾಗಿದೆ. ಈ ಮಾತನ್ನು ಮೊದಲೇ ಒಪ್ಪಿಕೊಳ್ಳುತ್ತೇನೆ. ಉತ್ತುಂಗ ಶಿಖರದಿಂದ ನೀವು ಸಾಮ್ರಾಜ್ಯ ದಾಸೆಯ ಪಾತಾಳಕ್ಕೆ ಇಳಿದಿದ್ದೀರಿ. ನಿಮ್ಮ ಆ ಆಶೆ ಸಾಧಿಸಲಾರಿರಿ ನೀವು. ಏಷ್ಯಾ ಖಂಡವನ್ನು ಭಾಗ ವಿಭಾಗಮಾಡಿ, ಅಬುದ್ಧಿಪೂರ್ವಕವಾಗಿ ಜಾಗತಿಕ ರಾಷ್ಟ್ರ ಸಂಘಟನೆಯನ್ನು ಮುರಿದು, ಅದರಿಂದ ಮಾನವ ಕೋಟಿಗೆ ಶಾಂತಿ ಇಲ್ಲದಂತೆ ಮಾಡುವಿರಿ.

೫೦ ವರ್ಷದ ಕೆಳಗೆ, ನನಗೆ ೧೮ ವರ್ಷವಾಗಿದ್ದಾಗ ಲಂಡನ್‌ನಲ್ಲಿ ನಾನು ಓದುತ್ತಿದ್ದೆ, ಆಗಿನಿಂದಲೂ ಸರ್ ಎಡ್ವಿನ್ ಆರ್ನಾಲ್ಡರ ಲೇಖನಗಳ ಮೂಲಕ ನಿಮ್ಮ ಜನಾಂಗದ ಅನೇಕ ಉತ್ತಮ ಗುಣಗಳನ್ನು ಮೆಚ್ಚಿದ್ದೇನೆ. ನಾನು ದಕ್ಷಿಣ ಆಫ್ರಿಕದಲ್ಲಿದ್ದಾಗ ನೀವು ರಷ್ಯಾದವರನ್ನು ಶಸ್ತ್ರಯುದ್ಧದಲ್ಲಿ ಸೋಲಿಸಿದುದನ್ನು ಕೇಳಿ ಮೈನವಿರಾಗಿತ್ತು. ೧೯೧೫ ರಲ್ಲಿ ನಾನು ಭಾರತಕ್ಕೆ ಮರಳಿದ ಮೇಲೆ ನಮ್ಮ ಆಶ್ರಮದಲ್ಲಿ ಕಾಲಕಾಲಕ್ಕೆ ವಾಸವಾಗಿದ್ದ ಜಪಾನೀ ಭಿಕ್ಷುಗಳ ಸಮೀಪ ಪರಿಚಯ ನನಗಾಗಿದೆ. ಅವರಲ್ಲಿ ಒಬ್ಬ ಭಿಕ್ಷು ಸೇವಾಗ್ರಾಮದ ಆಶ್ರಮದಲ್ಲೂ ಅಮೂಲ್ಯ ವ್ಯಕ್ತಿಯಾಗಿದ್ದ. ಆತನ ಕರ್ತವ್ಯ ತತ್ಪರತೆ, ಗಾಂಭೀರ್ಯ, ನಿತ್ಯದ ಧ್ಯಾನದಲ್ಲಿ ಆತನ ಅಕುಂಠಿತವಾದ ಶ್ರದ್ಧೆ, ಸಜ್ಜನಿಕೆ, ಬೇರೆ ಬೇರೆ ಸಂದರ್ಭದಲ್ಲಿ ಆತ ತೋರಿದ ಅನುದ್ವೇಗ, ಎಲ್ಲಕ್ಕೂ ಮೀರಿ ಆತನ ಸಹಜ ಮೃದು ಹಾಸ, ಆತನ ಅಂತರಂಗದ ಶಾಂತಿಗೆ ಸಾಕ್ಷಿಯಾಗಿ ನಮ್ಮೆಲ್ಲರನ್ನೂ ಅಭಿಮಾನ ಪಡುವಂತೆ ಮಾಡಿತ್ತು. ನೀವು ಬ್ರಿಟನ್ನಿನ ಮೇಲೆ ಯುದ್ಧ ಹೂಡಿದ್ದರಿಂದ ಆತನನ್ನು ನಮ್ಮ ಮಧ್ಯದಿಂದ ಕರೆದುಕೊಂಡು ಹೋಗಿದ್ದಾರೆ; ನಮ್ಮ ಇಷ್ಟ ಸಹಚರರಲ್ಲೊಬ್ಬನಿಲ್ಲದಂತಾಗಿದೆ ನಮಗೆ.

ಹೋಗುವಾಗ ಆತ ತನ್ನ ದಿನದಿನದ ಧ್ಯಾನ, ಬಿಟ್ಟಿದ್ದಾನೆ. ಆತನ ದುಂಧುಬಿ ಧ್ವನಿಯಿಂದಲೇ ನಾವೀಗ ನಮ್ಮ ಸಂಜೆ ಮುಂಜಾನೆಯ ಪ್ರಾರ್ಥನೆಯನ್ನು ಪ್ರಾರಂಭಿಸುತ್ತಿದೇವೆ.

ಇಂಥ ಹಿಗ್ಗಿನ ನೆನಪಿನ ಜೊತೆಗೆ ನೀವು ಚೀಣಾದ ಮೇಲೆ ಹೂಡಿರುವ ನಿರ್ವ್ಯಾಜ ಯುದ್ಧ. ಆ ಪುರಾತನ ಮಹಾ ದೇಶದಲ್ಲಿ ನಮಗೆ ಬಂದ ಸುದ್ದಿಯನ್ನು ನಂಬಬಹುದಾದರೆ, ನಿರ್ದಯೆಯಿಂದ ನೀವು ನಡಸಿದ ಸರ್ವನಾಶವನ್ನು ಯೋಚಿಸಿದರೆ, ನನಗೆ ಬಹಳ ದುಃಖವಾಗುತ್ತಿದೆ.

ಜಗತ್ತಿನ ಇತರ ಮಹಾರಾಜ್ಯಗಳ ಜೊತೆಗೆ ಸರಿಸಮನಾಗಿ ನಿಲ್ಲಬೇಕೆಂಬ ನಿಮ್ಮ ಆಸೆ ಯೋಗ್ಯವಾದುದು. ಆದರೆ ಚೀಣಾದ ಆಕ್ರಮಣ, ಶತ್ರುರಾಷ್ಟ್ರಗಳೊಡನೆ ನೀವು ಮಾಡಿದ ಮೈತ್ರಿ. ಆಯಾಸೆಯ ಅನವಶ್ಯಕವಾದ ಅತಿರೇಕ.

ನಿಮ್ಮ ಉತ್ತಮ ಸಾಹಿತ್ಯವೆಲ್ಲ ಚೀಣಾದ್ದು. ಅದನ್ನು ನಿಮ್ಮದೆಂದು ಸ್ವೀಕರಿಸಿದ್ದೀರಿ. ಆ ಪ್ರಾಚೀನವಾದ ಮಹಾಜನಾಂಗ, ನಿಮ್ಮ ನೆರೆಯದೆಂಬ ಹೆಮ್ಮೆ ನಿಮಗಿದೆ ಎಂದುಕೊಂಡಿದ್ದೆ. ನಿಮ್ಮ ಪರಸ್ಪರ ಇತಿಹಾಸ, ಸಂಪ್ರದಾಯ, ಸಾಹಿತ್ಯಗಳ ಜ್ಞಾನ ನಿಮ್ಮನ್ನು ಗೆಳೆಯರನ್ನು ಮಾಡಬೇಕಿತ್ತು; ಈಗಿರುವ ಹಾಗೆ ಹಗೆಗಳನ್ನಾಗಿ ಅಲ್ಲ.

ನಾನು ಸ್ವತಂತ್ರನಾಗಿದ್ದರೆ, ನಿಮ್ಮ ದೇಶಕ್ಕೆ ಬರಲು ನೀವು ನನ್ನನ್ನು ಬಿಟ್ಟರೆ, ನನ್ನ ಆರೋಗ್ಯವನ್ನು ಲಕ್ಷಿಸಿ, ಸಾವಿಗೂ ಹೆದರದೆ ಈ ದುರ್ಬಲ ಸ್ಥಿತಿಯಲ್ಲಿ ನಿಮ್ಮ ದೇಶಕ್ಕೆ ಬರುತ್ತಿದ್ದೆ; ಬಂದು ಚೀನಾಕ್ಕೂ ಪ್ರಪಂಚಕ್ಕೂ ನಿಮಗೂ, ತನ್ಮೂಲಕ ನೀವು ಮಾಡುತ್ತಿರುವ ಹಾನಿಯನ್ನು ನಿಲ್ಲಿಸಿರೆಂದು ನಿಮ್ಮನ್ನು ಬೇಡುತ್ತಿದ್ದೆ.

ಆದರೆ ನನಗೂ ಸ್ವಾತಂತ್ರ್ಯವಿಲ್ಲ. ನಿಮ್ಮ ಸಾಮ್ರಾಜ್ಯಗಳಂಥ ಮತ್ತೊಂದು ಸಾಮ್ರಾಜ್ಯವನ್ನು ಎದುರಿಸಬೇಕಾದ ವಿಶೇಷ ಸನ್ನಿವೇಶದಲ್ಲಿದೇವೆ ನಾವು. ನಿಮ್ಮ ಮತ್ತು ನಾಜೀ ಸಾಮ್ರಾಜ್ಯಗಳನ್ನು ಕಂಡರೆ ಎಷ್ಟು ಅಸಹ್ಯವೋ ಇದನ್ನು ಕಂಡರೂ ನಮಗಷ್ಟೇ ಅಸಹ್ಯ. ಏನಾದರೂ ವ್ಯತ್ಯಾಸವಿದ್ದರೆ ಅದು ಕೊಂಚ ಹೆಚ್ಚು, ಕೊಂಚ ಕಡಿಮೆಯಲ್ಲಿ. ಮಾನವಕೋಟಿಯ

ಐದರಲ್ಲೊಂದು ಪಾಲು ಜನರನ್ನು ಬ್ರಿಟಿಷರು ಮೆಟ್ಟಿ ನಿಂತಿದ್ದಾರೆ. ಅದಕ್ಕಾಗಿ ಅವರು ಮಾಡಿದ ಉಪಾಯ ವಿಮರ್ಶೆಗೆ ಅರ್ಹವಲ್ಲ. ನಾವು ಅದನ್ನು ವಿರೋಧಿಸಿದರೂ ಬ್ರಿಟಿಷರಿಗೆ ತೊಂದರೆಯಾಗಲೆಂಬ ಮನಸ್ಸಿಲ್ಲ. ಅವರನ್ನು ಪರಿವರ್ತನ ಮಾಡುವ ಬಯಕೆ ನಮ್ಮದು. ನಮ್ಮದು ಬ್ರಿಟಿಷ್ ಅಧಿಕಾರದ ಇದಿರು ನಿಶ್ಶಸ್ತ್ರ ವಿರೋಧ. ನಮ್ಮ ದೇಶದಲ್ಲಿ ಮುಖ್ಯವಾದ ಪಕ್ಷವೊಂದು ಪರಕೀಯ ರಾಜರೊಡನೆ ಘೋರವಾದ, ಆದರೆ ಸ್ನೇಹಪೂರ್ಣವಾದ ಯುದ್ಧ ನಡೆಸುತ್ತಿದೆ.

ಈ ಕದನದಲ್ಲಿ ಅವರಿಗೆ ಪರರಾಷ್ಟ್ರಗಳ ನೆರವು ಬೇಕಾಗಿಲ್ಲ. ನೀವು ಭಾರತದ ಮೇಲೆ ಬೀಳಲಿರುವ ಈ ಸಂದರ್ಭದಲ್ಲಿ ಮಿತ್ರರಾಷ್ಟ್ರಗಳಿಗೆ ನಾವು ತೊಡರು ತಂದೊಡ್ಡುತಿದ್ದೇವೆಂದು ನಿಮಗೆ ತಪ್ಪು ತಿಳುವಳಿಕೆಯಾಗಿದೆ. ನಾ ಬಲ್ಲೆ. ಬ್ರಿಟನ್ನಿನ ಸಂಕಟವೇ ನಮ್ಮ ಲಾಭಕ್ಕೆ ಸಮಯ ಎಂದಿದ್ದರೆ ಯುದ್ಧ ಪ್ರಾರಂಭವಾದಾಗಲೆ, ಮೂರು ವರ್ಷದ ಕೆಳಗೆಯೆ ನಾವು ಹಾಗೆ ಮಾಡಬಹುದಾಗಿತ್ತು.

ಬ್ರಿಟಿಷರೇ ! ಭಾರತ ಬಿಟ್ಟು ಹೊರಡಿ ಎಂಬ ನಮ್ಮ ಚಳುವಳಿಯನ್ನು ಅಪಾರ್ಥಮಾಡಿಕೊಳ್ಳಬೇಡಿ. ಭಾರತವು ಸ್ವತಂತ್ರವಾಗಲಿ, ಬ್ರಿಟನ್ ಆ ಸ್ವಾತಂತ್ರ್ಯವನ್ನೊಪ್ಪಲಿ ಎಂಬುದು ನಿಮ್ಮ ಚಿಂತೆಯಂತೆ; ಸುದ್ದಿ ಹಾಗಿದೆ. ಇದು ನಿಜವಾದರೆ ಭಾರತದ ಮೇಲೆ ದಂಡೆತ್ತಿ ಬರಲು ನಿಮಗಾವ ಕಾರಣವೂ ಇಲ್ಲವಲ್ಲ. ನಿಮ್ಮ ನಿಷ್ಕರುಣವಾದ ಚೀನಾ ಆಕ್ರಮಣಕ್ಕೂ ಈ ಸದಿಚ್ಛೆಗೂ ಮೇಳಗೂಡುವುದಿಲ್ಲ.

ಭಾರತದಲ್ಲಿ ನಿಮಗೆ ಸ್ವಾಗತ ಕಾದಿದೆ ಎಂದು ನೀವು ತಿಳಿದಿದ್ದರೆ ನಿಮ್ಮ ಭ್ರಾಂತಿಯೆಲ್ಲ ಬರೀ ಬಯಲಾದೀತು; ಈ ಮಾತನ್ನು ತಿಳಿದುಕೊಳ್ಳಿ; ಭ್ರಾಂತಿಗೆ ಅವಕಾಶ ಕೊಡಬೇಡಿ ಎಂದು ನಿಮಗೆ ಹೇಳಬಯಸುತ್ತೇನೆ. ಬ್ರಿಟಿಷರು ಹೊರಟು ಹೋಗಲಿ ಎಂಬ ಚಳುವಳಿಯ ಗುರಿ, ಸಾಮ್ರಾಜ್ಯಕಾಂಕ್ಷೆ, ದಿಗ್ವಿಜಯಾಕಾಂಕ್ಷೆಗಳನ್ನು ಇದಿರಿಸುವಂತೆ ಭಾರತವನ್ನು ಸಿದ್ಧಗೊಳಿಸುವದು; ಆ ಸಾಮ್ರಾಜ್ಯಕಾಂಕ್ಷೆ, ಬ್ರಿಟಿಷರದಿರಲಿ, ಜರ್ಮನಿಯದಿರಲಿ, ನಿಮ್ಮದೇ ಆಗಲಿ. ನಾವು ಹಾಗೆ ಮಾಡಲಾರೆವಾದರೆ ಅಹಿಂಸೆಯು ಈ ಯುದ್ಧದಾಹಕ್ಕೆ, ಹಿಂಸಾಬಲಕ್ಕೆ

ಏಕೈಕ ಔಷಧವೆಂಬುದನ್ನು ನಂಬಿಯೂ ಕೂಡ, ಜಗತ್ತು ಶಸ್ತ್ರಬಲಕ್ಕೆ ಅಡಿಯಾಗುವುದನ್ನು ಕಣ್ಣಾರೆ ನೋಡುತ್ತ ಕೂತ ಅವಮಾನ ನಮ್ಮದಾಗುತ್ತದೆ. ಶತ್ರುರಾಷ್ಟ್ರಗಳು ಹಿಂಸೆಯನ್ನು ಒಂದು ಧರ್ಮವನ್ನಾಗಿ ಮಾಡಿವೆ. ಭಾರತ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳದೆ ಅವನ್ನು ಗೆಲ್ಲುವುದು ಮಿತ್ರರಾಷ್ಟ್ರಗಳಿಗೆ ಸಾಧ್ಯವಿಲ್ಲವೆಂದು ನನಗನಿಸುತ್ತದೆ. ನಿಮ್ಮ ಹಿಂಸಾಮಯ ಯುದ್ಧ ಕೌಶಲ್ಯವನ್ನು ಮೀರಿಸಿದರೆ ತಾನೆ ಅವರು ನಿಮ್ಮನ್ನೂ ನಿಮ್ಮ ಜೊತೆಗಾರರನ್ನೂ ಗೆಲ್ಲಬೇಕಾದುದು? ನಿಮ್ಮನ್ನೇ ಅವರು ಅನುಕರಿಸಿದರೆ ಪ್ರಪಂಚದಲ್ಲಿ ವ್ಯಕ್ತಿ ಸ್ವಾತಂತ್ರ್ಯ, ಪ್ರಜಾಪ್ರಭುತ್ವಗಳ ಸಂರಕ್ಷಣೆಗೆ ನಾವು ಪಣತೊಟ್ಟಿದೇವೆಂಬ ಅವರ ಘೋಷಣೆ ವ್ಯರ್ಥವಾಗುತ್ತದೆ. ನಿಮ್ಮ ಕಾರ್ಯವನ್ನು ಅನುಕರಿಸದಿರಲು ಅವರಿಗೆ ಶಕ್ತಿ ಬರಬೇಕಾದರೆ, ಬೆಳೆಯಬೇಕಾದರೆ, ಒಂದೇ ಹಾದಿ: ಈಗಲೆ ಭಾರತದ ಸ್ವಾತಂತ್ರ್ಯವನ್ನು ಒಪ್ಪಿ ಪ್ರಕಟಿಸಿ ಈಗ ಬಲಾತ್ಕಾರದಿಂದ ಸಿಗುವ ಹಿಂದುಸ್ಥಾನದ ಸಿಡುಕಿನ ಸಹಾಯವನ್ನು ಸ್ವತಂತ್ರ ಭಾರತದ ಸ್ವೇಚ್ಛಾ ಸಹಕಾರವನ್ನಾಗಿ ಮಾಡಿಕೊಳ್ಳಬಹುದು.

ನ್ಯಾಯದ ಹೆಸರಿನಲ್ಲಿ ಬ್ರಿಟನ್ನನ್ನೂ ಮಿತ್ರರಾಷ್ಟ್ರಗಳನ್ನೂ ನಾವು ಪ್ರಾರ್ಥಿಸಿದೇವೆ. ಅವರಾಡಿದ ಮಾತನ್ನು ನಡೆಸಲೆಂದು, ಅವರ ಹಿತಕ್ಕಾಗಿಯೇ ಪ್ರಾರ್ಥಿಸಿದ್ದೇವೆ. ನಿಮ್ಮನ್ನೂ ಮಾನವತೆಯ ಪರವಾಗಿ ಬೇಡುತ್ತೇನೆ. ಕರುಣಾಹೀನವಾದ ಯುದ್ಧಕಾರ್ಯ ಯಾರ ಗುತ್ತಿಗೆಯೂ ಅಲ್ಲವೆಂಬುದು ನಿಮಗೆ ಹೇಗೆ ತಿಳಿದಿಲ್ಲವೋ? ನನಗಚ್ಚರಿ. ಈ ಮಿತ್ರರಾಷ್ಟ್ರಗಳಲ್ಲದಿದ್ದರೆ ಮತ್ತೊಂದು, ನಿಮ್ಮ ಶಸ್ತ್ರದಿಂದಲೆ ನಿಮ್ಮನ್ನು ಗೆಲ್ಲುವುದು ಖಂಡಿತ. ಒಂದು ವೇಳೆ ನೀವು ಗೆದ್ದರೂ ಮುಂದೆ ನಿಮ್ಮ ಜನ ಹೆಮ್ಮೆಪಡಬಹುದಾದಂಥ ಭಾಗ್ಯವನ್ನೇನು ನೀವು ಗಳಿಸಿಡಲಾರಿರಿ. ಎಷ್ಟೇ ಯುಕ್ತಿಪೂರ್ಣವಾಗಿರಲಿ, ರಾಕ್ಷಸ ಕೃತ್ಯಗಳ ವರ್ಣನೆಯಲ್ಲಿ ಯಾರಿಗೆ ತಾನೆ ಹೆಮ್ಮೆ ಇದ್ದೀತು?

ನೀವು ಗೆದ್ದರೂ ನಿಮ್ಮದು ನ್ಯಾಯವೆಂದಾಗುವುದಿಲ್ಲ. ವಿನಾಶ ಶಕ್ತಿಯಲ್ಲಿ ನಿಮ್ಮ ಕೈ ಮೇಲಾಗಿತ್ತು ಎಂದಾಗುತ್ತದೆ. ಏಷಿಯಾ, ಆಫ್ರಿಕಾ ಖಂಡಗಳಲ್ಲಿನ ಎಲ್ಲ ಅಧೀನ ದೇಶಗಳನ್ನೂ ಸ್ವತಂತ್ರ ಮಾಡುವ ವಚನ ಕೊಟ್ಟು, ಆ ವಚನದ ಭರವಸೆಗೆಂದು ಭಾರತವನ್ನು ಸ್ವತಂತ್ರಮಾಡುವ

ನ್ಯಾಯವಾದ, ಪುಣ್ಯ ಕಾರ್ಯವನ್ನು ಈಗಲೇ ಮಾಡದಿದ್ದರೆ ಮಿತ್ರರಾಷ್ಟ್ರಗಳಿಗೂ ಇದೇ ಮಾತೇ ಅನ್ವಯಿಸುತ್ತದೆ.

ಬ್ರಿಟನ್ನಿಗೆ ನಾವು ಮಾಡುವ ಪ್ರಾರ್ಥನೆಯ ಜೊತೆಗೆ ಮಿತ್ರರಾಷ್ಟ್ರಗಳ ಸೇನೆ ಹಿಂದುಸ್ಥಾನದಲ್ಲಿರದ ಸ್ವತಂತ್ರ ಭಾರತವು ಸಮ್ಮತಿಯನ್ನೂ ಸೂಚಿಸಿದೇವೆ. ಮಿತ್ರರಾಷ್ಟ್ರಗಳ ಉದ್ದೇಶಕ್ಕೆ ಯಾವ ವಿಧದಲ್ಲೂ ಭಂಗ ತರುವ ಮನಸ್ಸು ನಮಗಿಲ್ಲವೆಂದು ತೋರಿಸುವುದಕ್ಕೂ, ಬ್ರಿಟಿಷರು ಬಿಟ್ಟು ಹೋದರೆ ನೀವು ನಿರಾಯಾಸವಾಗಿ ಇಲ್ಲಿ ಕಾಲಿಡಬಹುದೆಂಬ ಭ್ರಾಂತಿ ನಿಮಗೆ ಉಂಟಾಗದಿರಲೆಂದೂ, ಈ ಸೂಚನೆಮಾಡಿದೇವೆ. ನಿಮಗೆ ಅಂಥ ಅಭಿಪ್ರಾಯವೇನಾದರೂ ಇದ್ದು, ನೀವು ಹಾಗೆ ಮಾಡಿದ್ದೇ ಆದರೆ ನಮ್ಮ ದೇಶದ ಸರ್ವಶಕ್ತಿಯನ್ನು ಸಾಧ್ಯವಾದಷ್ಟು ಉಪಯೋಗಿಸಿ ನಿಮ್ಮನ್ನು ವಿರೋಧಿಸುವ ಪ್ರಯತ್ನವನ್ನು ತಪ್ಪದೆ ಮಾಡುತ್ತೇವೆ. ನಮ್ಮ ಚಳುವಳಿಯ ಪ್ರಭಾವದಿಂದ ನೀವೂ ನಿಮ್ಮ ಪಾಲುಗಾರರೂ ಸನ್ಮಾರ್ಗ ತುಳಿದೀರಿ; ಕಟ್ಟಕಡೆಗೆ ನಿಮ್ಮ ನೈತಿಕ ಸರ್ವನಾಶಕ್ಕೂ ಮಾನವ ಜೀವಿಗಳು ಯಂತ್ರದ ಗೊಂಬೆಗಳಂತಾಗುವುದಕ್ಕೂ ಕಾರಣವಾಗುವ ನಿಮ್ಮ ದಾರಿ ಬಿಟ್ಟೀರಿ ಎಂಬ ಆಸೆಯಿಂದ ನಿಮ್ಮನ್ನು ಹೀಗೆ ಪ್ರಾರ್ಥಿಸುತ್ತಿದೇನೆ.

ನನ್ನ ಪ್ರಾರ್ಥನೆಗೆ ಬ್ರಿಟನ್ ಎಷ್ಟು ಮಟ್ಟಿಗೆ ಕಿವಿಗೊಡಬಹುದೊ ಅದಕ್ಕಿಂತ ನೀವು ಕಿವಿಗೊಡುವ ಆಸೆ ಕಡಿಮೆಯೆ. ಬ್ರಿಟಿಷರಿಗೆ ನ್ಯಾಯಬುದ್ಧಿ ಇಲ್ಲದೆ ಇಲ್ಲ; ನಾ ಬಲ್ಲೆ. ಅವರೂ ನನ್ನನ್ನು ಬಲ್ಲರು. ನೀವು ಹೀಗ ಎಂದು ಹೇಳುವಷ್ಟು ನಿಮ್ಮ ವಿಷಯ ನನಗೆ ತಿಳಿಯದು. ನಾನು ಓದಿರುವುದೆಲ್ಲ ಹೇಳುವುದಿಷ್ಟೆ: ಪ್ರಾರ್ಥನೆಗಳಲ್ಲಿ ನೀವು ಮಣಿಯುವುದು, ಕತ್ತಿಗೆ ಈ ವರ್ಣನೆ ತಪ್ಪು. ದಯಾಹೀನವಾದ ಅಪಪ್ರಚಾರವೇ ಆಗಿ, ನಿಮ್ಮ ಹೃದಯದ ಸರಿಯಾದ ತಂತಿಯನ್ನೇ ನಾನು ಮೀಟಬಲ್ಲೆನಾದರೆ! ಅದೇನೇ ಇರಲಿ, ಮಾನವ ಸ್ವಭಾವ ದನಿಗೆ ದನಿಗೂಡಿಸುತ್ತದೆಂದು ನನಗೆ ಸ್ಥಿರವಾದ ನಂಬಿಗೆ ಇದೆ. ಆ ನಂಬಿಗೆಯ ಬಲದಿಂದಲೆ ನಾನೀ ಬರಲಿರುವ ಚಳುವಳಿಯನ್ನು ರಚಿಸಿದೇನೆ; ನಿಮಗೀ ಪ್ರಾರ್ಥನೆ ಮಾಡಲು ಪ್ರೇರಿಸಿದುದೂ ಆ ನಂಬಿಗೆಯೇ.

ಸೇವಾಗ್ರಾಮ
೧೮—೭—೧೯೪೨

ನಿಮ್ಮ ಗೆಳೆಯ, ಹಿತಕಾಂಕ್ಷಿ
ಮೋ. ಕ. ಗಾಂಧಿ

# ಅಮೇರಿಕದ ಗೆಳೆಯರಿಗೆ

ಗೆಳೆಯರೆ,

ಅತಿ ವಾದವಿವಾದಕ್ಕೂ, ಅಷ್ಟೇ ಮಟ್ಟಿಗೆ ಬಯ್ಗಳಿಗೂ ಗುರಿಯಾಗಿರುವ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ತೀರ್ಮಾನದಲ್ಲಿ ನನ್ನ ಕೈವಾಡ ಇದೆ, ನಾನೇ ಸೂತ್ರಧಾರ ಎನ್ನುತ್ತಿದಾರೆ. ಅಂತೆಯೇ, ನನ್ನ ಅಭಿಪ್ರಾಯ, ನೆಲೆ ತಿಳಿಸ ಬೇಕಾಗಿದೆ. ನಾನೇನು ನೀವರಿಯದ ಮನುಷ್ಯನಲ್ಲ. ಪಾಶ್ಚಾತ್ಯ ಖಂಡ ವಲ್ಲೆಲ್ಲ ಇಂಗ್ಲೆಂಡಿಗಿಂತಲೂ ಹೆಚ್ಚು ಜನ ಗೆಳೆಯರು ನನಗೆ ಬಹುಶಃ— ಅಮೇರಿಕದಲ್ಲಿದ್ದಾರೆ. ಬ್ರಿಟಿಷ್ ಗೆಳೆಯರು ನನ್ನನ್ನು ಪ್ರತ್ಯಕ್ಷವಾಗಿ ಬಲ್ಲರು; ಅಮೇರಿಕದವರಿಗಿಂತ ಹೆಚ್ಚು ಸೂಕ್ಷ್ಮವಾಗಿ ತಿಳಿದುಕೊಂಡಿದ್ದಾರೆ. ಅಮೇ ರಿಕದಲ್ಲಿ ವೀರಪೂಜೆಯ ಮಹಾರೋಗಕ್ಕೆ ತುತ್ತಾಗಿದೇನೆ. ಮೊನ್ನೆಯತನಕ ನ್ಯೂಯಾರ್ಕ್ ಯೂನಿಟಿ ಚರ್ಚಿನಲ್ಲಿದ್ದ ಡಾ. ಹೋಲ್ಸ್ ನನ್ನ ಪರಿಚಯ ವಿಲ್ಲದೆಯೆ ನನ್ನ ಪ್ರಚಾರಕರಾಗಿದ್ದರು. ನನ್ನ ಬಗ್ಗೆ ಎಷ್ಟೋ ಒಳ್ಳೆಯ ಮಾತು ಹೇಳಿದ್ದಾರೆ ಅವರು. ಕೆಲವು ನನಗೆ ತಿಳಿದಿರಲಿಲ್ಲ. ಹೀಗಾಗಿ ಆ ಪವಾಡ, ಈ ಪವಾಡ ಮೆರೆಸಿರೆಂದು ಆಗಾಗ ನನಗೆ ಅಮೇರಿಕದಿಂದ ಪತ್ರ ಬರುತ್ತವೆ; ಬಲು ತೊಡಕಿನ ಪತ್ರ. ತರುವಾಯ ಕೆಲವು ದಿನದ ಮೇಲೆ ದಿವಂಗತ ಬಿಷಪ್ ಫಿಷರ್—ಅವರು ಹಿಂದುಸ್ಥಾನದಲ್ಲಿದ್ದಾಗ ನನ್ನ ಪರಿಚಯ ಅವರಿಗಿತ್ತು—ಡಾ. ಹೋಲ್ಸರ ಹಾದಿ ತುಳಿದರು. ಅವರು ನನ್ನನ್ನು ಅಮೇರಿಕಕ್ಕೂ ಎಳೆದು ಬಿಟ್ಟರು. ಇನ್ನೇನು, ಬರಬೇಕಾಗಿತ್ತು; ಆದರೆ ದೈವಚಿತ್ತ ಬೇರೆ ಇತ್ತು. ನಿಮ್ಮ ವಿಶಾಲವಾದ ಮಹಾದೇಶವನ್ನೂ, ಅದ್ಭುತ ಚರಿತ್ರರಾದ ಜನರನ್ನೂ ಬಂದು ನೋಡಲಾಗಲಿಲ್ಲ.

ಇಷ್ಟೇ ಅಲ್ಲ. ನೀವು ನನಗೆ ಗುರುಭಿಕ್ಷೆ ನೀಡಿದೀರಿ. ದಕ್ಷಿಣ ಆಫ್ರಿಕ ದಲ್ಲಿ ನಾ ಮಾಡುತ್ತಿದ್ದುದಕ್ಕೆ ಶಾಸ್ತ್ರೀಯ ಸ್ವರೂಪ ಮುದ್ರೆ ಒತ್ತಿದುದು ನಿಮ್ಮ

ಥೋರೋನ 'ಸವಿನಯ ಶಾಸನಭಂಗ ಕರ್ತವ್ಯ' ಎಂಬ ಲೇಖನ. ಇಂಗ್ಲೆಂಡು ರಸ್ಕಿನ್‌ನನ್ನು ನೀಡಿದೆ ನನಗೆ. 'ಆತನ ಕಟ್ಟಕಡೆಗೆ'—Unto This Last—ಎಂಬ ಪುಸ್ತಕ ನನ್ನನ್ನು ಪೂರಾಬದಲು ಮಾಡಿಬಿಟ್ಟಿತು- ಬೆಳಕು ಹರಿಯುವುದರೊಳಗಾಗಿ ನನ್ನ ವಕೀಲಿ, ಪಟ್ಟಣದವಾಸ ಮುಗಿದು ಡರ್ಬಾನ್ ಪಟ್ಟಣಕ್ಕೆ ದೂರವಾಗಿ, ರೈಲಿಗೆ ಮೂರು ಮೈಲಿ ದೂರದಲ್ಲಿ, ತೋಟವೊಂದ ರಲ್ಲಿ ಹಳ್ಳಿಗನಂತೆ ಬಾಳತೊಡಗಿದೆ. ರಷ್ಯಾ ನನಗೆ ಟಾಲ್‌ಸ್ಟಾಯನ್ನು ಕೊಟ್ಟಿತು. ನನ್ನ ಅಹಿಂಸೆಗೆ ಸತರ್ಕವಾದ ಆಧಾರವನ್ನು ಒದಗಿಸಿದ ಗುರು ಆತ. ದಕ್ಷಿಣ ಆಫ್ರಿಕದಲ್ಲಿ ನಾ ನಡಸಿದ ಚಳುವಳಿ ಇನ್ನೂ ಎಳಸು, ಆದರ ಅದ್ಭುತ ಬಲ ನನಗೇ ತಿಳಿದಿರಲಿಲ್ಲ; ಆಗಲೇ ಆತ ಅದನ್ನು ಹರಸಿದ. ನಾ ನಡಸಿದ ಚಳುವಳಿ ಜಗತ್ತಿನ ದಲಿತ ಜನಾಂಗಗಳಿಗೊಂದು ಭಾಗ್ಯೋದಯ ಸಂದೇಶವಾದೀತು ಎಂದು—ಅವರು ಬರೆದ ಪತ್ರವೊಂದರಲ್ಲಿ ಭವಿಷ್ಯ ನುಡಿದವರು ಅವರೇ. ಸಧ್ಯದ ನನ್ನೀ ಕರ್ತವ್ಯವನ್ನು ಕೈಗೊಂಡುದರಲ್ಲಿ ನನಗೆ ಬ್ರಿಟಿಷರ ಮೇಲಾಗಲಿ ಪಾಶ್ಚಾತ್ಯರ ಮೇಲಾಗಲಿ ಯಾವ ಬಗೆಯ ದ್ವೇಷವೂ ಇಲ್ಲ; ಇದರಿಂದ ನಿಮಗೆ ತಿಳಿಯಲಿ. 'ಕಟ್ಟಕಡೆಗೆ'ಯ ಸಂದೇಶ ವನ್ನುಗ್ರಹಿಸಿದವನು ವ್ಯಕ್ತಿಧರ್ಮ, ವ್ಯಕ್ತಿಸ್ವಾತಂತ್ರ್ಯ ವಿನಾಶಕವಾದ ಫ್ಯಾಸಿಜಂ, ನಾಜಿ ಜಂಗಳನ್ನು ನಾ ಒಪ್ಪಿಯೇನೆ ? ಅಂಥ ತಪ್ಪು ನನ್ನಿಂದಾದೀತೆ ?

ಹಿಂದೆ ಸರಿಯಿರಿ ಎಂಬ ನನ್ನ ಸೂತ್ರವನ್ನು—'ಭಾರತ ಬಿಟ್ಟು ಹೊರಡಿ' ಎಂದು ಜನ ಹೇಳುತ್ತಿರುವುದನ್ನು—ಈ ಹಿನ್ನೆಲೆಯಲ್ಲಿ ಅರ್ಥಮಾಡಿ ಕೊಳ್ಳಿ ಎಂದು ಕೇಳುತ್ತೇನೆ. ಸಂದರ್ಭೋಚಿತವಾದುದಕ್ಕಿಂತ ಹೆಚ್ಚು ಅರ್ಥ ಅದರಲ್ಲಿ ನೀವು ಹಿಂಡಬೇಕಾಗಿಲ್ಲ.

ಎಳೆತನದಿಂದಲೂ ಸತ್ಯಾರಾಧನೆಯಲ್ಲಿ ತೊಡಗಿದವನು ನಾನು. ನನಗದು ಅತಿ ಸಹಜವಾಗಿತ್ತು. 'ದೇವರು ಸತ್ಯ' ಎಂಬುದು ವಾಡಿಕೆ. ಅದರ ಬದಲು ನನ್ನ ಪ್ರಾರ್ಥನಾಮಯ ಶೋಧನೆ 'ಸತ್ಯವೇ ದೇವರು' ಎಂಬ ಜ್ಞಾನಪ್ರದಾಯಕ ಸತ್ಯವನ್ನು ನನಗೆ ಕೊಟ್ಟಿತು. ಆ ಸತ್ಯಬಲದಿಂದ ದೇವರು ನನ್ನ ಕಣ್ಣಮುಂದೆ ನಿಂತಂತಾಗಿದೆ; ದೇವರನ್ನು ಕಣ್ಣೆದುರಿಗೆ ಕಾಣು ತ್ತಿದೇನೆ ಅನ್ನುವಷ್ಟು ಬಲಬಂದಿದೆ. ನನ್ನ ಕಣಕಣದಲ್ಲೂ ಅವನು ವ್ಯಾಪಿಸಿ

ವಾನೆ ಅನಿಸುತ್ತಿದೆ. ನಮ್ಮಿಬ್ಬರ ನಡುವೆ ಈ ಸತ್ಯ ಸಾಕ್ಷಿಯಾಗಿ ಹೇಳುತ್ತೇನೆ : ಇಂಗ್ಲೆಂಡಿಗಾಗಿ, ಮಿತ್ರಮಂಡಲಿಯ ಸಂಕಲ್ಪಕ್ಕಾಗಿ ಇಂಗ್ಲೆಂಡು ಧೈರ್ಯದಿಂದ ಭಾರತದ ಬಂಧ ವಿಮೋಚನೆ ಮಾಡುವುದು ಅತ್ಯಗತ್ಯವೆಂದು ನನಗೆ ಕಂಡು ಬರದಿದ್ದರೆ ವಿರುದ್ಧ ಬೇಡಿಕೆ ನೂರಿರಲಿ—ಇರಲಿ ಬಿಡಲಿ ಹಿಂದೆ ಸರಿಯಿರೆಂದು ಇಂಗ್ಲೆಂಡಿಗೆ ನಾ ಖಂಡಿತವಾಗಿಯೂ ಹೇಳುತ್ತಿರಲಿಲ್ಲ. ಗಟ್ಟಿಯಾಗಿ ಗೋಣ ಗುಟ್ಟಿ ಮೇಲೆ ಕಾಣಿಸಿಕೊಳ್ಳದಿದ್ದರೂ ಜಗತ್ತಿಗೊಂದು ಅಂತರಂಗವಿದೆ; ಆಗಲೆ ಕಾಲ ವಿಳಂಬವಾದರೂ ಮುಖ್ಯವಾದ ಈ ನ್ಯಾಯಕಾರ್ಯವನ್ನು ಮಾಡ ದಿದ್ದರೆ ಇಂಗ್ಲೆಂಡು ತನ್ನ ಮಾನ ಉಳಿಸಿಕೊಳ್ಳಲಾರದು. ಸಿಂಗಪೂರ್, ಮಲಯ, ಬರ್ಮಾಗಳನ್ನು ನೋಡಿ ಅಂಥ ದುರವಸ್ಥೆ ಭಾರತಕ್ಕೆ ಬರಬಾರ ದೆಂದು ನನಗೆ ಬುದ್ಧಿ ಬಂತು. ಭಾರತದ ಜನ ತಮ್ಮ ಸ್ವಾತಂತ್ರ್ಯವನ್ನು ಮಿತ್ರಮಂಡಲಿಯ ಪರವಾಗಿ ಉಪಯೋಗಿಸಿಯಾರೆಂದು ಇಂಗ್ಲೆಂಡು ನಂಬಿದ ರೇನೇ ಆ ದುರವಸ್ಥೆ ಭಾರತಕ್ಕೆ ಬಾರದಂತೆ ತಡೆಯಲು ಸಾಧ್ಯ; ಅನ್ಯಥಾ ಸಾಧ್ಯವಲ್ಲವೆಂದು ಹೇಳುವ ಸಾಹಸ ಮಾಡಿದ್ದೇನೆ. ಆ ಪರಮ ನ್ಯಾಯದ ಆ ಶ್ರೇಷ್ಠ ಕೃತಿಯೊಂದು ಸಾಕು—ತಳಮಳ ಕುದಿಯುತ್ತಿರುವ ಭಾರತದ ಅಶಾಂತಿಯ ಬೀಜವೆ ನಿರ್ಮೂಲವಾದೀತು. ಬೆಳೆಬೆಳೆದು ಬರುತ್ತಿರುವ ದ್ವೇಷವಾಗ ಸ್ನೇಹವಾದೀತು. ನಿಮ್ಮ ಅದ್ಭುತ ಶಿಲ್ಪಿಗಳೂ, ಅಪಾರ ಧನವೂ ನಿರ್ಮಿಸಬಹುದಾದ ಎಲ್ಲ ವಿಮಾನಗಳೂ, ಎಲ್ಲ ಯುದ್ಧನೌಕೆಗಳೂ ಒಂದು ತೂಕವಾದರೆ ಇದೊಂದೇ ಒಂದು ತೂಕ ಎನ್ನುತ್ತೇನೆ.

ಕಾಂಗ್ರೆಸ್ಸಿನ ಮನೋಭಾವದ ವಿಕೃತ ಚಿತ್ರ ಕಣ್ಣುತುಂಬ ನೋಡಿದೀರಿ; ಕಿವಿತುಂಬ ಕೇಳಿದೀರಿ ನೀವು. ಆ ರೀತಿ ನಿಮ್ಮಲ್ಲಿ ಪ್ರಚಾರ ಮಾಡಿದಾರೆ. ನನ್ನನ್ನು ಕಪಟಿ, ಇಂಗ್ಲೆಂಡಿನ ಮಿತ್ರವೇಷದ ಶತ್ರು ಎಂದು ಹೇಳಿದಾರೆ. ಎಲ್ಲವನ್ನು ಸಮನಿಸಿಕೊಂಡು ಹೋಗುವ ನನ್ನ ಸಮಂಜಸ ಸ್ವಭಾವವನ್ನು ಅಸಂಬದ್ಧತೆ ಎಂದಿದಾರೆ; ನಂಬಿಗೆಗೆ ತರವಲ್ಲದವನು ನಾನು ಎಂದು ತೋರಿಸಿ ದಾರೆ. ನಾನಾಡಿದ ಮಾತಿಗೆ ಸಾಕ್ಷಿಕೊಟ್ಟು ಈ ಪತ್ರವನ್ನು ಬೆಳೆಸುವುದಿಲ್ಲ. ಅಮೇರಿಕದಲ್ಲಿ ನನಗಿರುವ ಗೌರವ ನನಗೆ ನೆರವಾಗಬೇಕೇ ವಿನಾ ನನ್ನ ಪರ ವಾಗಿ ನಾನೆಷ್ಟು ವಾದ ಮಾಡಿದರೆ ತಾನೆ ಅಮೇರಿಕದ ಕಿವಿಯಲ್ಲಿ ವಿಷತುಂಬಿದ ಈ ಅಸತ್ಯ ಪ್ರಚಾರದ ಜಾಲವನ್ನು ಕತ್ತರಿಸಬಲ್ಲೆ !

ಇಂಗ್ಲೆಂಡಿನ ಜೊತೆಗೆ ನೀವು ಕೈಕಲೆಸಿದೀರಿ; ಹೆಗಲುಕೊಟ್ಟಿದೀರಿ. ಅಂತೆಯೇ ಇಂಗ್ಲೆಂಡಿನ ಪ್ರತಿನಿಧಿಗಳು ಭಾರತದಲ್ಲಿ ಮಾಡಿದ ಕೆಲಸಕ್ಕೆ ಏನೇ ಮಾಡಲಿ ನೀವು ಹೊಣೆಗಾರರಲ್ಲವೆನ್ನಲು ಬರುವಂತಿಲ್ಲ. ಇನ್ನೂ ಕಾಲ ಮೀರಿಲ್ಲ. ಕಾಲ ಮೀರುವ ಮೊದಲೆ ಜೊಳ್ಳು ತೂರಿ, ಸತ್ಯವನ್ನು ಶೋಧಿಸ ದಿದ್ದರೆ ಮಿತ್ರಮಂಡಲಿಯ ಉದ್ದೇಶಕ್ಕೆ ನೀವೆ ಮಹತ್ತರ ಹಾನಿ ಮಾಡಿ ದಂತಾದೀತು. ಸ್ವಲ್ಪ ವಿಚಾರ ಮಾಡಿ ನೋಡಿ. ಭಾರತದ ಸ್ವಾತಂತ್ರ್ಯ ವನ್ನು ಯಾವ ನಿರ್ಬಂಧವೂ ಇಲ್ಲದೆ ಒಪ್ಪಿಕೊಳ್ಳಿ ಎಂದು ಕಾಂಗ್ರೆಸ್ ಕೇಳಿದರೆ ಅದರಲ್ಲೇನು ತಪ್ಪಿದೆ ? 'ಇದು ಕಾಲವಲ್ಲ' ಎನ್ನುತ್ತಿದ್ದಾರೆ. ನಾವು ಹೇಳು ವುದು ಇಷ್ಟೆ: 'ಆ ಮಾತು ಒಪ್ಪಿಕೊಳ್ಳಲು ಇದೇ ಸರಿಯಾದ ಸಮಯ. ಹಾಗೆ ಮಾಡಿದರೇನೇ ಜಪಾನೀ ದಾಳಿಗೆ ದುರ್ದಮನೀಯವಾದ ವಿರೋಧ ಬಂದೀತು. ಭಾರತಕ್ಕೆ ಅವರಿಂದ ಎಷ್ಟು ಲಾಭವೋ ಮಿತ್ರಮಂಡಲಿಗೂ ಅಷ್ಟೇ ಲಾಭವುಂಟು. ಈ ದಾರಿಯಲ್ಲಿ ಏನೇನು ತೊಂದರೆ ಬಂದೀತೋ ಎಲ್ಲವನ್ನು ಕಾಂಗ್ರೆಸ್ ಊಹಿಸಿದೆ, ಅದಕ್ಕೆಲ್ಲ ಉಪಾಯವನ್ನು ಯೋಚಿಸಿದೆ. ಭಾರತ ಸ್ವಾತಂತ್ರ್ಯವನ್ನು ತತ್‌ಕ್ಷಣವೇ ಒಪ್ಪಿಕೊಳ್ಳುವುದು ಮುಖ್ಯವಾದ, ಪ್ರಥಮ ಗಣ್ಯವಾದ ಯುದ್ಧ ಕಾರ್ಯಕ್ರಮವೆಂದು ನೀವು ತಿಳಿದುಕೊಳ್ಳಬೇಕೆಂದು ಬಯಸುತ್ತೇನೆ

ಬೊಂಬಾಯಿ ದಾರಿಯಲ್ಲಿ — ನಿಮ್ಮ ಗೆಳೆಯ

೩—೮—'೪೨ — ಮೋ. ಕ. ಗಾಂಧಿ

---

## ಚೀನೀ ದಳಪತಿಗೆ

ಪ್ರಿಯ ದಳಪತಿ,

ಕಲಕತ್ತೆಯಲ್ಲಿ ಎರಡು ಗಂಟೆಯ ಹೊತ್ತು ನನಗೆ ಲಭಿಸಿದ ನಿಮ್ಮ—ದಂಪತಿಗಳ—ಅಂತರಂಗ ಸಹವಾಸವನ್ನು ನಾನೆಂದಿಗೂ ಮರೆಯಲಾರೆ. ನಿಮ್ಮ ಸ್ವಾತಂತ್ರ್ಯ ಯುದ್ಧ ನನ್ನನ್ನು ನಿಮ್ಮ ಕಡೆ ಸೆಳೆದೇ ಇತ್ತು. ಆ ಸಹ ವಾಸ, ಆ ಸಲ್ಲಾಪ ಚೀನಾ ದೇಶವನ್ನೂ ಆ ದೇಶದ ಸಮಸ್ಯೆಗಳನ್ನೂ ನನಗೆ ಮತ್ತಿಷ್ಟು ಆಪ್ತವನ್ನಾಗಿ ಮಾಡಿದವು. ಬಹುಕಾಲದ ಹಿಂದೆಯೇ ೧೯೦೫ ರಿಂದ ೧೯೧೩ ರೊಳಗೆ, ನಾನು ದಕ್ಷಿಣ ಆಫ್ರಿಕಾದಲ್ಲಿದ್ದಾಗ ಜೊಹಾನ್ಸ್ ಬರ್ಗಿನ ಚೀನೀ ವಸತಿಯ ನಿರಂತರ ಪರಿಚಯು ನನಗಿತ್ತು. ಮೊದಲು ಅವರು ನನ್ನ ಪಕ್ಷಗಾರರಾಗಿದ್ದರು. ತರುವಾಯ ದಕ್ಷಿಣ ಆಫ್ರಿಕದ ಭಾರ ತೀಯ ಸತ್ಯಾಗ್ರಹದಲ್ಲಿ ಸಂಗಾತಿಗಳಾದರು. ಮಾರಿಷಸ್‌ನಲ್ಲಿಯೂ ನನಗವರ ಪರಿಚಯವಿತ್ತು. ಅವರ ಮಿತವ್ಯಯ, ಉದ್ಯೋಗಶೀಲತೆ, ಸಮಯಸ್ಫೂರ್ತಿ, ಐಕಮತ್ಯನೋಡಿ ಅವರನ್ನು ನಾ ಮೆಚ್ಚಿದೆ. ಆ ಮೇಲೆ ಹಿಂದುಸ್ಥಾನದಲ್ಲಿ ನನ್ನ ಜೊತೆಗೊಬ್ಬ ಚಲೋ ಚೀನೀ ಗೆಳೆಯ ಕೆಲವು ವರ್ಷ ವಾಸವಾಗಿದ್ದ. ನಮಗೆಲ್ಲ ಆತನಲ್ಲಿ ಪ್ರೀತಿ ಬೆಳೆದಿತ್ತು.

ಹೀಗೆ ನಿಮ್ಮ ಮಹಾದೇಶದ ಕಡೆ ತುಂಬಾ ಒಲಿದಿದೇನೆ. ನಿಮ್ಮ ಘೋರ ಸಂಗ್ರಾಮದಲ್ಲಿ ನನ್ನ, ನಮ್ಮ ನಾಡಿನ ಜನರ, ಸಾನುಭೂತಿ ನಿಮ್ಮ ಕಡೆಗೆ ಹರಿದಿದೆ. ನಮ್ಮ ಗೆಳೆತನದ ತಂತು, ಜವಾಹರಲಾಲ ನೆಹರು,—ಆತನಿಗಿರುವ ಚೀನಾದೇಶದ ಪ್ರೇಮಕ್ಕೆ ಮೀರಿದ ಪ್ರೇಮ ಬಹುಶಃ ತಾಯಿ ನಾಡಿನ ಮೇಲೆ ಇದ್ದೀತೋ ಏನೋ—ನಮಗೆಲ್ಲ ಚೀನಾ ಸಂಗ್ರಾಮದ ವಿವರ ಗಳನ್ನು ತಿಳಿಸುತ್ತಲೇ ಇದಾರೆ.

ಚೀನಾದ ಬಗ್ಗೆ ನನಗಿರುವ ಈ ಮಮತೆ, ನಮ್ಮ ದೇಶಗಳೆರಡೂ ಹತ್ತಿರ ಬಂದು ಪರಸ್ಪರ ಅನುಕೂಲಕ್ಕಾಗಿ ಸಹಕರಿಸಬೇಕೆಂಬ ನನ್ನ ತೀವ್ರ ಭಾವ ಆಸೆ, ಬ್ರಿಟಿಷರಿಗೆ ನಾ ಮಾಡಿದ ಬಿನ್ನಹವನ್ನು ನಿಮಗೆ ತಿಳಿಸಿ ಹೇಳ ಬೇಕೆಂಬ ಬಯಕೆ ಹುಟ್ಟಿಸಿದೆ. ಭಾರತ ಬಿಟ್ಟು ಹೊರಡಿರೆಂದು ಬ್ರಿಟಿಷರಿಗೆ ನಾ ಮಾಡಿದ ಬಿನ್ನಹದಲ್ಲಿ ಜಪಾನಿನೊಡನೆ ಕಾದುವ ನಮ್ಮ ಬಲವನ್ನು ತಗ್ಗಿಸುವ ಉದ್ದೇಶವಾಗಲಿ, ನಿಮ್ಮ ಕದನದಲ್ಲಿ ನಿಮಗೆ ತೊಂದರೆ ಕೊಡುವುದಾಗಲಿ ಅಲ್ಲ. ಯಾವ ದಾಳಿಗಾರನಿಗೂ ಭಾರತ ತಲೆ ಬಾಗಕೂಡದು; ವಿರೋಧಿಸಬೇಕು. ನಿಮ್ಮ ದೇಶದ ಸ್ವಾತಂತ್ರ್ಯವನ್ನು ಬಲಿಕೊಟ್ಟು ನಮ ದೇಶದ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವ ಅಪರಾಧ ನಾ ಮಾಡಲಾರೆ. ನನಗಾ ಸಮಸ್ಯೆಯೇ ಇಲ್ಲ. ಈ ದಾರಿಯಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಗ ವೆಂಬುದು ನನಗೆ ಸ್ಪಷ್ಟವಾಗಿ ಗೊತ್ತಿದೆ. ಭಾರತವನ್ನಾಗಲಿ ಚೀನಾವನ್ನಾಗಲಿ ಒಂದನ್ನು ಜಪಾನು ಆಕ್ರಮಿಸಿದರೆ ಇನ್ನೊಂದಕ್ಕೂ ಅಷ್ಟೇ ಹಾನಿಕರ, ಇಡೀ ಜಗತ್ಶಾಂತಿಗೇ ಹಾನಿಕರ. ಅಂತೆಯೆ ಆ ಆಕ್ರಮಣವನ್ನು ತಡೆಯಬೇಕು. ಈ ಮಹಾಕಾರ್ಯದಲ್ಲಿ ನನಗೆ ಸಹಜವಾದ, ನ್ಯಾಯವಾದ ಪಾತ್ರವನ್ನು ಭಾರತ ವಹಿಸಲಿ ಎಂದು ಬಯಸುತ್ತೇನೆ.

ಬಂಧನದಲ್ಲಿರುವ ತನಕ ಭಾರತ ಈ ಕೆಲಸ ಮಾಡಲಾರದು ಅನಿಸುತ್ತದೆ ನನಗೆ. ಮಲಯ, ಸಿಂಗಪೂರ್, ಬರ್ಮಾಗಳಿಂದ ಬ್ರಿಟಿಷರು ಮೈ ತೆಗೆದುದನ್ನು ಕಣ್ಣಾರೆ ನೋಡಿದೆ ನಿಸ್ಸಹಾಯ ಭಾರತ. ಈ ದುರಂತ ಘಟನೆಗಳಿಂದ ನಾವು ಪಾಠ ಕಲಿಯಬೇಕು; ಆ ನಿರ್ಭಾಗ್ಯ ದೇಶಗಳಿಗೆ ಬಂದ ದುಃಸ್ಥಿತಿ ನಮಗೂ ಬಾರದಂತೆ ತಡೆಯಲು ಸರ್ವವಿಧದಲ್ಲೂ ಪ್ರಯತ್ನ ಮಾಡಬೇಕು. ಆದರೆ ನಾವು ಸ್ವತಂತ್ರರಾಗದೆ ಅದನ್ನು ತಡೆಯುವ ಪ್ರಯತ್ನ ಯಾವುದೂ ನಮಗೆ ಸಾಧ್ಯವಲ್ಲ; ಅಲ್ಲಿ ನಡೆದಂತೆ ಇಲ್ಲಿಯೂ ನಡೆದೀತು. ಭಾರತ, ಚೀನಾ ಎರಡಕ್ಕೂ ಕೈ ಮುರಿದಂತಾದೀತು. ಆ ದುರಂತ ಕರ್ಮ ಕಥೆ ಮತ್ತೊಮ್ಮೆ ನಡೆಯಬಾರದು; ನನಗದು ಬೇಡ.

ನಾವು ನೀಡಿದ ಸಹಾಯವನ್ನು ಬಾರಿಬಾರಿಗೂ ಬ್ರಿಟಿಷ್ ಸರಕಾರ ತಿರಸ್ಕರಿಸಿದೆ, ಮೊನ್ನೆಮೊನ್ನೆ ನಡೆದ ಕ್ರಿಪ್ಸ ಸಂಧಾನಪರ್ವದ ವಿಫಲತೆ ಮಾಡಿದ

ಆಳವಾದ ಗಾಯ ಇನ್ನೂ ಮಾಗಿಲ್ಲ. ಆ ದಾರುಣ ಸಂಕಟದಿಂದ ಹೊಮ್ಮಿದೆ ಬ್ರಿಟಿಷರೆ ಭಾರತವನ್ನು ಕೂಡಲೇ ಬಿಟ್ಟು ಹೊರಡಿ ಎಂಬ ಕೂಗು; ಆದರಿಂದ ಭಾರತ ತನ್ನ ಯೋಗಕ್ಷೇಮ ತಾ ನೋಡಿಕೊಂಡು, ತನಗೆ ಶಕ್ತಿಯಿದ್ದಷ್ಟು ಚೀನಾಕ್ಕೆ ಸಹಾಯ ಮಾಡೀತು.

ಅಹಿಂಸೆಯಲ್ಲಿ ನನಗಿರುವ ಶ್ರದ್ಧೆಯನ್ನೂ, ಇಡೀ ರಾಷ್ಟ್ರವೆ ಈ ಮಾರ್ಗ ಹಿಡಿದರೆ ಎಷ್ಟು ಪರಿಣಾಮವಾದೀತೆಂಬುದರ ಬಗ್ಗೆ ನನ್ನ ನಂಬಿಗೆಯನ್ನೂ ನಿಮಗೆ ತಿಳಿಸಿದೇನೆ. ಆ ಶ್ರದ್ಧೆ ಎಂದಿನಂತೆಯೆ ಅಷ್ಟೇ ದೃಢವಾಗಿದೆ. ಆದರೆ ಇಡಿಗೆ ಇಡೀ ಭಾರತ ಜನಾಂಗಕ್ಕೆಂದು ಆ ನಂಬಿಗೆಯಿಲ್ಲ, ಆ ಶ್ರದ್ಧೆಯಿಲ್ಲ; ನಾ ಬಲ್ಲೆ. ಸ್ವತಂತ್ರ ಭಾರತದ ಸರಕಾರ ಜನಾಂಗದ ನಾನಾ ಪಂಗಡದವರನ್ನು ಒಳಗೊಂಡು ನಿರ್ಮಿತವಾದೀತು.

ಇಂದು—ಇಡೀ ಭಾರತವೇ ಕೈಲಾಗದೆ, ನಿರಾಶೆಗೊಂಡಿದೆ. ಭಾರತ ಸೇನೆಗೆ ಸೇರಿರುವ ಜನರಲ್ಲನೇಕರು ಹೊಟ್ಟೆಯ ಪಾಡಿಗಾಗಿ ಸೇರಿದವರು. ತಾವು ಮಾಡುತ್ತಿರುವ ಯುದ್ಧ ಒಂದು ಮಹೋದ್ದೇಶಕ್ಕಾಗಿ ಎಂಬ ಭಾವನೆ ಆವರಿಗಿಲ್ಲ. ಯಾವ ಬಗೆಯಲ್ಲೂ ಅವರು ರಾಷ್ಟ್ರೀಯ ಸೇನೆಯಲ್ಲ. ಮಹೋದ್ದೇಶಕ್ಕಾಗಿ ಭಾರತ–ಚೀನಾಗಳಿಗಾಗಿ, ಆಯುಧ ಸಜ್ಜಿತ ಸೇನೆಯಿಂದಲೋ ಅಹಿಂಸೆಯಿಂದಲೋ ಹೇಗಾದರೂ ಹೋರಾಡಬೇಕೆಂಬ ನಾವು ಈ ಪರಾಧೀನತೆಯಲ್ಲಿ ನಮಗೆ ಬೇಕಾದಂತೆ ನಡೆಯಲಾರೆವು; ಸಾಧ್ಯವಿಲ್ಲ. ಆದರೂ ನಮ್ಮ ಜನಕ್ಕೆ ಖಂಡಿತವಾಗಿಯೂ ಗೊತ್ತಿದೆ; ಭಾರತ ಸ್ವತಂತ್ರವಾದರೆ ತನಗಾಗಿ ಮಾತ್ರವೇ ಅಲ್ಲ, ಚೀನಕ್ಕಾಗಿ, ಜಗತ್ತಿನ ಶಾಂತಿಗಾಗಿ ನಿರ್ಣಾಯಕ ಪಾತ್ರವಹಿಸೀತು. ನನ್ನಂತೆ ಅನೇಕರಿಗೆ, ಈ ನಿಸ್ಸಹಾಯ ಸ್ಥಿತಿಯಲ್ಲಿ ಹೀಗೆ ಇದ್ದು, ಬರಲಿರುವ ಘಟನೆಗಳ ಪ್ರವಾಹದಲ್ಲಿ ಮುಳುಗಿ ಹೋಗುವುದು ಪರಿಣಾಮಕಾರಿಯಾದ ಕ್ರಿಯಾಮಾರ್ಗವೊಂದು ನಮಗೆ ದೊರೆಯಲು ಸಾಧ್ಯವಿರುವಾಗ ಯೋಗ್ಯವಲ್ಲ, ಪೌರುಷವಲ್ಲ ಅನಿಸುತ್ತದೆ. ಅಂತೆಯೇ ಸ್ವರಾಜ್ಯಕ್ಕಾಗಿ, ಅತ್ಯವಸರವಾಗಿ ಬೇಕಾಗಿರುವ ಕ್ರಿಯಾಸ್ವಾತಂತ್ರ್ಯಕ್ಕಾಗಿ ಸರ್ವ ಪ್ರಯತ್ನವನ್ನೂ ಮಾಡಬೇಕು ಅನಿಸುತ್ತಿದೆ ಅವರಿಗೆ. ಬ್ರಿಟನ್ನಿಗೂ

ಭಾರತಕ್ಕೂ ಇರುವ ಅಸ್ವಾಭಾವಿಕ ಸಂಬಂಧವನ್ನು ಕೂಡಲೆ ಕೊನೆಗಾಣಿಸಿ ರೆಂದು ಬ್ರಿಟಿಷರನ್ನು ನಾನು ಪ್ರಾರ್ಥಿಸುವದಕ್ಕೆ ಇದೇ ಕಾರಣ.

ನಾವು ಆ ಪ್ರಯತ್ನ ಮಾಡದಿದ್ದರೆ ಭಾರತದ ಜನರ ಮನಸ್ಸು ತಪ್ಪು ದಾರಿ ಹಿಡಿದು ಹಾನಿಕರ ಮಾರ್ಗದಲ್ಲಿ ಹರಿಯುವ ಸಂಭವ, ವಿಪತ್ತು ಇದೆ. ಬ್ರಿಟಿಷ್ ಅಧಿಕಾರ ಸಡಲಿ ಹೋದರೆ ಸಾಕು ಎಂದು ಒಳಗೊಳಗೆ ಜಪಾನಿನ ಕಡೆ ಜನರ ಮನಸ್ಸು ತಿರುಗುವ ಸಂದರ್ಭ ಪೂರಾ ಇದೆ. ನಮ್ಮ ಸ್ವಾತಂತ್ರ್ಯ ಸಾಧನೆಗೆ ಪರರ ಸಹಾಯವನ್ನೆಂದೂ ಕೋರದ ಆತ್ಮ ವಿಶ್ವಾಸದ ಬದಲಾಗಿ ಈ ತರದ ಮನೋವೃತ್ತಿ ಬೆಳೆದೀತು. ನಾವು ಆತ್ಮಾವಲಂಬನೆ ಕಲಿಯ ಬೇಕು; ನಮ್ಮ ವಿಮೋಚನೆ ನಾವೇ ಪಡೆಯಲು ಬಲವನ್ನು ಗಳಸಬೇಕು. ಈಗ ಒದಗಿರುವ ಆಗತ್ಯದಿಂದ ನಮ್ಮ ಸ್ವಾತಂತ್ರ್ಯವನ್ನು ಪಡೆದು ಜಗತ್ತಿನ ಸ್ವತಂತ್ರ ರಾಷ್ಟ್ರಗಳ ಜೊತೆಗೆ ನಾವು ನಿಂತರೇನೆ ಇದು ಸಾಧ್ಯವಾದೀತು.

ಜಪಾನೀ ದಾಳಿಯನ್ನು ಎಲ್ಲ ಬಗೆಯಿಂದಲೂ ತಡೆಯುವ ಬಯಕೆ ಇದೆ ನಮಗೆ. ಈ ಮಾತನ್ನು ಸ್ಪಷ್ಟಗೊಳಿಸಲು ಬೇಕಾದರೆ ಮಿತ್ರರಾಷ್ಟ್ರಗಳು ನಮ್ಮೊಡನೆ ಸಂಧಿಮಾಡಿಕೊಂಡು ಅವರ ಸೇನೆಯನ್ನು ಭಾರತದಲ್ಲಿ ಇಡಲಿ, ಜಪಾನೀ ದಾಳಿಯನ್ನೆದುರಿಸಲು ಇಲ್ಲಿ ತಳವೂರಿ ಯುದ್ಧ ನಡೆಸಲಿ. ಇದಕ್ಕೆ ನಾನೊಪ್ಪುತ್ತೇನೆ. ಸ್ವತಂತ್ರ ಭಾರತದ ಸರಕಾರವೂ ಒಪ್ಪೀತೆಂಬ ನಂಬಿಗೆ ನನಗಿದೆ.

ಭಾರತದ ಈ ಹೊಸ ಸಂಚಲನದ ಕಾರಣಕರ್ತ ನಾನು; ಇದರಲ್ಲಿ ಆವಸರವಾಗಿ ಯಾವ ಕೆಲಸವನ್ನೂ ಮಾಡೆನೆಂದು ನಿಮಗೆ ಭರವಸೆ ಕೊಡಲೆ ? ಅಗತ್ಯವಿದೆಯೋ ? ನಾನೇನೇ ಕಾರ್ಯಕ್ರಮ ಕೊಡಲಿ ಅದರಿಂದ ಚೀನಾಕ್ಕೆ ಬಾಧಕವಾಗದೆಂಬ ವಿಚಾರ; ಚೀನಾದಲ್ಲಾಗಲಿ ಭಾರತದಲ್ಲಾಗಲಿ ಜಪಾನೀ ದಾಳಿಗೆ ಪ್ರೋತ್ಸಾಹ ಕೊಟ್ಟಂತಾಗಬಾರದೆಂಬುದೂ ನನ್ನ ಲಕ್ಷ್ಯಸೂತ್ರ. ನನ್ನ ಮಟ್ಟಿಗೆ ನನ್ನ ಸಲಹೆ ಸ್ವತಃಸ್ಸಿದ್ಧ, ಅಗ್ಗೆನೆಲ್ಲಿಕಾಯಿ. ಅದರಿಂದ ಚೀನಾದ, ಭಾರತದ ಸಂರಕ್ಷಣ ಬಲ ಬೆಳೆಯಲೇಬೇಕು. ಈ ಸಲಹೆಗೆ ಅನುಕೂಲವಾಗಿ ಜಗತ್ತಿನ ಅಭಿಪ್ರಾಯವನ್ನು ದೊರಕಿಸುತ್ತಿದೇನೆ. ನನ್ನ ಜೊತೆಗಾರರೊಡನೆ ಆಲೋಚಿಸುತ್ತಿದ್ದೇನೆ. ಬ್ರಿಟಿಷರ ವಿರುದ್ಧ ನಾ ಮಾಡುವ ಚಳುವಳಿ—ನನಗೆ ಸಂಬಂಧಿಸಿದ ಯಾವ ಚಳುವಳಿಯೇ ಆಗಲಿ ಅಹಿಂಸಾತ್ಮಕ

ವಾಗಿದ್ದೀತೆಂದು ನಾ ಹೇಳಬೇಕಾಗಿಲ್ಲ. ಬ್ರಿಟಿಷ ಅಧಿಕಾರದೊಡನೆ ಕಲಹ ವಾಗದಂತೆ ನನ್ನ ಬಲವನ್ನೆಲ್ಲ ಉಪಯೋಗಿಸಿ ಪ್ರಯತ್ನಿಸುತ್ತಿದೇನೆ. ಆದರೆ ನಮಗೆ ಸ್ವಾತಂತ್ರ್ಯ ಕೂಡಲೇ ಬೇಕಾಗಿದೆ. ಅದನ್ನು ಗಳಿಸುವ ಪ್ರಯತ್ನದಲ್ಲಿ ಬ್ರಿಟಿಷರೊಡನೆ ಕಲಹ ಪ್ರಾಪ್ತವಾದರೆ ಎಂಥ ಅಪಾರ ನಷ್ಟವಾಗಲಿ, ಹಾನಿಯಾಗಲಿ ಅದಕ್ಕೆ ಹಿಂದೆಗೆಯುವಂತಿಲ್ಲ; ಹಿಂದುಮುಂದು ಯೋಚಿಸುವಂತಿಲ್ಲ.

ನೀವು ಜಪಾನೀ ದಾಳಿಯನ್ನು, ಆಕ್ರಮಣವನ್ನು ಇದಿರಿಸಿ, ದುಃಖ ಸಂಕಟಪರಂಪರೆಯನ್ನು ಅನುಭವಿಸತೊಡಗಿ ಐದು ವರ್ಷ ಇಷ್ಟರಲ್ಲೆ ತುಂಬುತ್ತದೆ. ಚೀನೀ ಜನ ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ, ಅಖಂಡ ಸುಭದ್ರತೆಗಾಗಿ ಪ್ರಚಂಡ ವಿರೋಧದಿದಿರು ನಿಂತು ಅವರು ಮಾಡಿದ ಕೊನೆಯಿಲ್ಲದ ತ್ಯಾಗ, ನಡೆಸಿದ ವೀರ ಕದನ ನೋಡಿ ನಾ ತಲೆದೂಗಿದ್ದೇನೆ. ಚೀನೀ ಜನರ ಬಗ್ಗೆ ಸಹಾನುಭೂತಿ ನನ್ನೆದೆಯಲ್ಲಿ ತುಂಬಿ ತುಳುಕುತ್ತಿದೆ. ಈ ವೀರತನ, ಈ ತ್ಯಾಗ ವ್ಯರ್ಥವಾಗದು; ಫಲಕಾರಿಯಾಗಲೇ ಬೇಕು, ನನಗೆ ಮುಂದಟ್ಟಾಗಿದೆ. ನಿಮಗೆ ಜಯವಾಗಲೆಂದು ಮನಃಪೂರ್ತಿಯಾಗಿ ಹಾರಯಿಸುತ್ತೇನೆ; ನಿಮಗೆ, ಶ್ರೀಮತಿ ಚಿಯಾಂಗಿಗೆ, ಶ್ರೇಷ್ಠಚರಿತರಾದ ಚೀನೀ ಮಹಾಜನಕ್ಕೆ ಈ ಹಾರಯಿಕೆ ತಿಳಿಸಬಯಸಿದೇನೆ. ಸ್ವತಂತ್ರ ಭಾರತ, ಸ್ವತಂತ್ರ ಚೀನಾ ಎರಡೂ ಸ್ವಕ್ಷೇಮಕ್ಕಾಗಿ, ಆಸಿಯಾ ಖಂಡದ ಹಿತಕ್ಕಾಗಿ, ಜಗತ್ತಿನ ಕಲ್ಯಾಣಕ್ಕಾಗಿ ಗೆಳೆತನದಿಂದ ಸೋದರಭಾವದಿಂದ ಕೈ ಕೈ ಕಲೆಸಿ ಸಹಕರಿಸುವ ದಿನಕ್ಕಾಗಿ ಇದಿರು ನೋಡುತ್ತಿದೇನೆ.

ತಮ್ಮ ಅನುಮತಿ ಇದೆಯೆಂದು ಗ್ರಹಿಸಿ ಈ ಪತ್ರವನ್ನು 'ಹರಿಜನ'ದಲ್ಲಿ ಪ್ರಕಟಿಸುವ ಸಲಿಗೆ ತೆಗೆದುಕೊಂಡಿದೇನೆ.

ನಿಜವಾಗಿಯೂ ನಿಮ್ಮ
ಮೋ. ಕ. ಗಾಂಧಿ

# ಇಂಗ್ಲಿಷ್ ಗೆಳೆಯರಿಗೆ

"ಕಾಂಗ್ರೆಸ್ ತೀರ್ಮಾನದ ಹಿನ್ನೆಲೆಯನ್ನು ಜವಾಹರಲಾಲ ನೆಹರು ಅರ್ಥವಾಗುವಂತೆ ತಿಳಿಸಿದರು. ಆದರೆ ಇವೊತ್ತು ಇಂಗ್ಲೆಂಡಿನಲ್ಲಿ ಜನರ ಮನೋಧರ್ಮ ಹೇಗಿದೆಯೆಂಬುದು ಅವರಿಗೂ ತಿಳಿಯಲಾರದು; ನ್ಯೂ ಸ್ಟೇಟ್ಸ್‌ಮನ್ ಸಂಪಾದಕರಿಗೆ ಇಲ್ಲಿನ ಹಿನ್ನೆಲೆ ಎಷ್ಟು ಅರ್ಥವಾದೀತೋ ಅಷ್ಟೇ ಅವರಿಗೂ ಯುದ್ಧ ವಾತಾವರಣದಿಂದಾಗುವ ಯುದ್ಧ ಮಾಡುವ ರಾಷ್ಟ್ರದ ನೀತಿಪತನ ಯುದ್ಧ ಸನ್ಯಾಸಕ್ಕೊಂದು ಪ್ರಬಲ ಕಾರಣವೆಂದು ನನಗನಿಸಿದೆ. ಆ ನೀತಿ ಪತನವಾದರೂ ಬಲು ಸೂಕ್ಷ್ಮರೀತಿಯಲ್ಲಿ, ನಾನಾ ವಿಧವಾಗಿ. ಇಂಗ್ಲೆಂಡು ಯುದ್ಧಕ್ಕೆ ತೊಡಗಿ ಮೂರು ವರ್ಷವಾಯಿತು. ಇಂಗ್ಲೀಷು ಜನ ಎಂದೂ ಕಾಣದ ದುರ್ಧರ ಸಂಕಟಕ್ಕೆ ಒಂದು ವರ್ಷ ಗುರಿಯಾಗಿದ್ದರು. ಈ ಭಾರವೆಲ್ಲ ಇಂಗ್ಲೆಂಡೊಂದರ ಮೇಲೆಯೇ ಬಿದ್ದಿತ್ತು. ಈಚೆಗೆ ವಿಮಾನ ದಾಳಿ ಕಡಿಮೆಯಾಗಿವೆ. ಆದರೂ ಯುದ್ಧದ ಬಿಸಿಯೇನು ತಪ್ಪಿಲ್ಲ. ಫಲ ಹೇಗಿದೆಯೋ ಎಲ್ಲಾ ಕಗ್ಗತ್ತಲು. ಇಂಗ್ಲೆಂಡೂ ಮಿತ್ರ ರಾಷ್ಟ್ರಗಳೂ ಗೆದ್ದೇ ಗೆಲ್ಲುತ್ತ್ವೆ; ಖಂಡಿತ. ಆದರೆ ಗೆಲವು ಸಿಗುವತನಕ ನಿಮಗಾಗಲಿ ಯಾರಿಗಾದರೂ ಆಗಲಿ ಇದಕ್ಕೇನು ಪ್ರಮಾಣ ತೋರಿಸಿಕೊಡಲಾದೀತು? ಅಂತೂ ಇಂಗ್ಲೆಂಡಿನಲ್ಲೇನೋ ಹಿಂದೆಂದೂ ಇಲ್ಲದಷ್ಟು ಪ್ರಯತ್ನ ಮಾಡುತ್ತಿದಾರೆ. ಇತ್ತ ಇಂಗ್ಲೆಂಡನ್ನು ನಾಶಮಾಡಿಬಿಡುತ್ತೇನೆ ಎನ್ನುತ್ತಿದಾನೆ ಹಿಟ್ಲರ್; ಅವನು ಆಡಿದಂತೆ ಮಾಡುವ ಕಠೋರ ಮನುಷ್ಯ. ಇಂಥ ಹೊತ್ತಿನಲ್ಲಿ ಇಂಗ್ಲೀಷು ಜನರಿಗೆ—ಭಾರತ ಸ್ವಾತಂತ್ರ್ಯದ ಬಗ್ಗೆ ಅಭಿಪ್ರಾಯವೇನೇ ಇರಲಿ, ಕಾಂಗ್ರೆಸ್ ಸೂಚನೆ ವಿಶ್ವಾಸದ್ರೋಹ, ಬೆನ್ನ ಹಿಂದೆ ನಿಂತು ಬಿಟ್ಟಬಾಣ ಎನಿಸುವುದು ಸಹಜ, ಅನಿವಾರ್ಯ. ೧೯೩೦ರಲ್ಲಿ ನಿಮ್ಮ ಗೆಳೆಯರಾಗಿದ್ದ, ಭಾರತ ಸ್ವಾತಂತ್ರ್ಯ ಪ್ರೇಮಿಗಳಾದ ಚೌ, ಲಂಕಷೈರಿನ ಜನ—ಗಂಡಸರು, ಹೆಂಗಸರು, ನಿಮ್ಮನ್ನು ಬಯ್ಯುತ್ತಿದಾರೆ; ನಿಷ್ಕರುಣೆಗಳಾದ ವೈರಿಗಳ ಘೋರ ವಿಪ್ಪತ್ತೊಂದು

ತಮಗೊದಗಿರುವಾಗ ತಮ್ಮ ಜೀವಾಳಕ್ಕೆ ಮತ್ತೊಂದು ಏಟು ಕೊಟ್ಟಿದಕ್ಕಾಗಿ ಶಪಿಸುತ್ತಿದಾರೆ. ಚರ್ಚಿಲ್ ಆಗಲಿ, ಕ್ರಿಪ್ಸ್ ಆಗಲಿ ಅವರಿಗಿದನ್ನು ಹೇಳಿ ಕೊಟ್ಟಿಲ್ಲ; ಅವರ ಕಣ್ಣಿಗೆ ಹಾಗೆ ಕಾಣುತ್ತಿದೆಯೆಂತಲೇ ಅವರು ಕಠೋರ ವಚನವಾಡುತ್ತಿದಾರೆ. ಕ್ರಿಪ್ಸ್‌ನ ರೇಡಿಯೋ ಭಾಷಣಕ್ಕಾಗಿ ನನಗೆ ದುಃಖ ವಾಗುತ್ತಿದೆ, ನಿಜವೆ. ಆದರೆ ನೀವೂ ಜವಾಹರಲಾಲರೂ ಉಳಿದ ಗೆಳೆಯರೂ ಕೊಡುತ್ತಿರುವ ಒಳನೋಟವಿಲ್ಲದೆ, ಇಂಗ್ಲೆಂಡಿನಲ್ಲಿ ಈಗ ಇದ್ದಿದ್ದರೆ, ನಾನೂ ಆತನ ಹಾಗೆಯೇ ತಿಳಿದುಕೊಳ್ಳುತ್ತಿದ್ದೆ.

ಈ ಕಲಹ ಆಗಲೇ ಬೇಕೆಂದರೆ ವಿಧಿಯಿಲ್ಲ. ಆದರೆ ಅದು ಪ್ರಾರಂಭ ವಾಗುವ ಮುನ್ನ ನಿಮ್ಮ ಇಂಗ್ಲೀಷು ಗೆಳೆಯರಿಗೆ—ಬೇಕಾದಷ್ಟು ಜನ ಇದಾರೆ—ನಾಲ್ಕು ಮಾತು ಹೇಳಿರೆಂದು ಬೇಡುತ್ತೇನೆ. ಅವರ ವಿನಾಶಕ್ಕೆ ಬಹುಶಃ ಕಾರಣವಾದ ಈ ಹಾದಿಯನ್ನೇಕೆ ತುಳಿದರೋ ಅವರಿಗೆ ಹೇಳಿ. ಈ ಹೆಜ್ಜೆ ಇಡುವುದು ಅವರಿಗೆಷ್ಟು ದುಃಖವೋ, ಸಂಕಟವೋ ನಿಮಗೂ ಅಷ್ಟೇ ದುಃಖ. ಸಂಕಟ ಎಂಬುದು ಅವರಿಗೆ ತಿಳಿಯಲಿ. ಈ ಸಂಕಟದಿಂದ ಹರಿತಗೊಂಡ ಮನಸ್ಸು ಅವರದು. ನೀವು ಹಾಕುವ ಹೆಜ್ಜೆ ತಮಗೆ, ರಷ್ಯಾ ಚೀನಾದವರಿಗೆ ಕೂಡ, ಎಷ್ಟು ಅನರ್ಥದಾಯಕವೋ ನಿಮಗೆ ಕಾಣುತ್ತಿಲ್ಲ, ನೀವು ಕುರುಡ ರಾಗಿದೀರಿ ಎಂದು ನಿಮ್ಮ ಇಂಗ್ಲೆಂಡಿನ ಗೆಳೆಯರು ತಿಳಿದಾರು. ನಾನದನ್ನು ಸಹಿಸಲಾರೆ.

ಏನೋ ತೋಡಿಕೊಂಡಿದೇನೆ ದುಃಖ, ಮನ್ನಿಸಬೇಕು. ನನ್ನ ದುಃಖ ವನ್ನೂ ನಿಮ್ಮೊಡನೆ ಹಂಚಿಕೊಳ್ಳಬೇಕೆಂದೆನಿಸಿತು."

ಈ ಪತ್ರ ಬರೆದ ಇಂಗ್ಲೀಷ್ ಗೆಳೆಯರು ಸುಪ್ರಸಿದ್ಧರು. ಭಾರತದ ಇಂಗ್ಲೀಷ್ ಗೆಳೆಯರಲ್ಲಿ ಶ್ರೇಷ್ಠರಾದವರು. ಅವರ ಪತ್ರದಲ್ಲಿ ವಿನಯದ ಮಿದುವಿದೆ, ನೈಜದ ಪ್ರಾಮಾಣಿಕತೆಯಿದೆ. ಉತ್ತರದಲ್ಲೂ ಅಷ್ಟೇ ಮಿದುವು ಪ್ರಾಮಾಣಿಕತೆಗಳಿರಬೇಕು. ಬ್ರಿಟಿಷರ ಮನೋಧರ್ಮದ ಬಗ್ಗೆ ಅವರು ಹೇಳಿದ ಪ್ರತಿಯೊಂದು ಮಾತನ್ನೂ ನಾ ನಂಬುತ್ತೇನೆ. ಅಗಾಥಾ ಹ್ಯಾರಿಸನ್ ಕೇಬಲ್ ಮೇಲೆ ಕೇಬಲ್ ಕಳಿಸುತ್ತಿದಾಳೆ. ನಾನೂ ಕಾಂಗ್ರೆಸ್ಸು ಮಾಡು ತ್ತಿರುವುದರ ಬಗ್ಗೆ ತನಗಾದ ಆಳವಾದ ನೋವನ್ನು ತಿಳಿಸುತ್ತಿದಾಳೆ.

ಆಕೆಯದು ದುರ್ಬಲ ದೇಹ. ಆದರೂ ತಪ್ಪು ತಿಳುವಳಿಕೆಯ ಪರೆ ಕಳೆಯಲು ಆಕೆ ಹಗಲಿರುಳೂ ದುಡಿಯುತ್ತಿದ್ದಾಳೆ. ಆಕೆಯನ್ನು ನೋಡಲೊಪ್ಪುವ—ಎಲ್ಲರೂ ನೋಡಿದಾರೆ—ಜವಾಬದಾರಿಯುಳ್ಳ ಎಲ್ಲ ಇಂಗ್ಲೀಷ್ ರಾಜಕೀಯ ಮುತ್ಸದ್ದಿಗಳನ್ನೂ ನೋಡುತ್ತಿದ್ದಾಳೆ. ಆದರೆ ಕೋಣನ ಮುಂದೆ ಕಿನ್ನರಿ ಬಾರಿಸಿದಂತಿದೆ ಅದೆಲ್ಲ. ಆ ಜನರಿಗೆ ನನ್ನಲ್ಲಿದ್ದ, ನಾ ತಿಳಿದಿದ್ದ—ನಂಬಿಗೆ ಇಂದು ಇಲ್ಲದಂತಾಗಿದೆ. ಕಳೆದುಕೊಂಡವನಿಗೆ ಕಾರಣವೆ ತಿಳಿಯದಿದ್ದರೆ ಅಂಥ ನಷ್ಟವನ್ನು ಸರಿಪಡಿಸುವುದು ಬಲು ಕಷ್ಟ, ದುಸ್ಸಾಧ್ಯ. ಸದ್ಯಕ್ಕೆ ಬಾರಿಬಾರಿಗೂ ಭರವಸೆ ಕೊಡುವುದರಲ್ಲಿಯೂ ಸದ್ಭಾವನೆಯ ಪ್ರಕಟನೆಯಲ್ಲಿಯೂ ನಾ ತೃಪ್ತನಾಗಬೇಕು. ಸ್ವರ್ಗವನ್ನೇ ಕೊಟ್ಟರೂ ನಂಬಿಗೆ ಕಳೆದುಕೊಳ್ಳಲಾರೆ ನಾನು. ಆದರೆ ನಂಬಿದವರ ಸಲುವಾಗಿಯೇ ನಂಬಿಗೆ ಅಳಿದರೆ ಅಳಿಯಲಿ—ಕಳೆದುಕೊಂಬುದಲ್ಲ—ಎಂಬ ದಿಟ್ಟತನದ ಕಾಲವೂ ಒಮ್ಮೊಮ್ಮೆ ಬರುವುದುಂಟು.

ನನ್ನ ಕುಟುಂಬದವರೊಡನೆಯೆ ನನ್ನ ಅಸಹಕಾರ ಪ್ರಯೋಗ ನಾ ಮೊದಲು ಮಾಡಿದೆ. ಆ ಸಾಹಸಗಳಿಗಾಗಿ ನಾನು ಮರುಗಬೇಕಾಗಿರಲಿಲ್ಲ ಅವರಿಗಾಗಿಯೆ ನಾನಾ ಗಂಡಾಂತರಗಳನ್ನು ಕೈಗೊಂಡೆನೆಂಬುದು ಅವರಿಗೇ—ಕೆಲವರಿಗೆ ಬೇಗ, ಕೆಲವರಿಗೆ ನಿಧಾನವಾಗಿ ತಿಳಿಯಿತು. ಪ್ರೀತಿ, ಸತ್ಯ ಎಷ್ಟು ಮಿದುವೋ ಅಷ್ಟು ಕಠಿಣ, ಕೆಲವು ವೇಳೆ.

ಕೊಂಚವೂ ಗೊಂದಲವಾಗದೆ ಈ ಕದನವನ್ನು ಕೊನೆಗಾಣಿಸಲೆಂದು ಬೇರೆಬೇರೆ ದಾರಿಯನ್ನು ಯೋಚಿಸುತ್ತ ಎಷ್ಟೋ ರಾತ್ರಿ ನಿದ್ದೆಯಿಲ್ಲದೆ ಕಳೆದಿದ್ದೇನೆ. ಆದರೆ ಬ್ರಿಟಿಷರ ಮನಸ್ಸಿಗೆ ಸತ್ಯನಾಟುವಂತೆ ಮಾಡಲು ಯಾವುದಾದರೊಂದು ಬಗೆಯ ಸಂಘರ್ಷಣ ಅನಿವಾರ್ಯವೆಂದು ಕಂಡುಬಂದಿತು. ಮುಂದೆ ನಡೆದ ಸಂಗತಿಗಳಿಂದ ನಾ ಮಾಡಿದುದು ಸರಿ, ನನ್ನ ಕೃತಿ ಶುದ್ಧ ಸ್ನೇಹದ ಕೃತಿಯೆಂದು ತಿಳಿದೀತು; ನನಗೆ ಸಂದೇಹವಿಲ್ಲ. ಸಂಕಟವೆಲ್ಲ ಜನರ ಪಾಲಿಗೇ ಬಂದೀತು ನಿಜವೆ. ಆದರೆ ಕಟ್ಟಕಡೆಗೆ ಬ್ರಿಟನ್ನಿನ ನೀತಿಯ ಹುರಿ—ದಾರ್ಢ್ಯ—ಸಡಲೀತು. ಹಾಗೆಂದು ತಾನು ಹೋದತ್ತ, ಈಗ ಹೋಗುತ್ತಿರುವಂತೆ, ಬಿಟ್ಟರೆ ಬ್ರಿಟನ್ ದಿವಾಳಿಯಾದರೊ, ಆ ದಿವಾಳಿ

ಯನ್ನು ನಿಲ್ಲಿಸಲು, ಬ್ರಿಟನ್ನಿಗೊಂದು ನೀತಿಯ ಹೆಚ್ಚಳ ಸಿಗುವಂತೆ ಮಾಡಲು ಹೂಡಿದುದು. ಅದರಿಂದ ಮಿತ್ರ ರಾಷ್ಟ್ರಗಳಿಗೆ ಗೆಲುವು ಖಂಡಿತ. ಇದರಲ್ಲಿ ಔದಾರ್ಯವೇನಿಲ್ಲ; ಅಂಥ ಅಗ್ಗಳಿಕೆ ಬೇಡ.

ಈ ಚಳುವಳಿಯಿಂದ ಭಾರತದ ಸ್ವಾತಂತ್ರ್ಯದ ಗುರಿ ಸಾಧಿಸೀತು. ಈ ಮಾತು ನಿಜ. ಎಂದೂ ಯಾರೂ ಇದನ್ನು ಅಲ್ಲವೆಂದಿಲ್ಲ. ಆದರೆ ಈ ಮಾತು ಇಲ್ಲಿ ಬೇಕಾಗಿಲ್ಲ. ಇಲ್ಲಿ ಬೇಕಾದ ಮಾತು—ಬ್ರಿಟನ್ ಬೇಡವೆಂದರೂ ಬ್ರಿಟನ್ನಿಗೆ ಸಹಾಯವಾಗಲು ಹೂಡಿದ ಚಳುವಳಿಯಿದು ಎಂಬುದು. ಇದು ಬಲು ದೊಡ್ಡ ಅಗ್ಗಳಿಕೆ, ಅಹಂಕಾರ ಎನಿಸಿಕೊಂಡೀತು. ಹಾಗೆ ಹೇಳಲು ನನಗೆ ನಾಚಿಕೆಯೇನಿಲ್ಲ, ನನ್ನ ದುಃಖಪೂರ್ಣ ಹೃದಯಾಂತರಾಳದಿಂದ ಬಂದುದು ಅದು. ಇದು ನಿಜವೋ ಸುಳ್ಳೋ ಕಾಲವು ತೋರಿಸೀತು. ಆ ನಿರ್ಣಯದ ಬಗ್ಗೆ ನನಗೆ ಸಂಶಯವಿಲ್ಲ. ವಿಚಾರತರ್ಕದ ಪ್ರಮಾಣ ತಪ್ಪಾದೀತು, ಹೃದಯದ ಪ್ರಮಾಣವೆಂದಿಗೂ ತಪ್ಪಾಗಲಾರದು.

ಮೋ. ಕ. ಗಾಂಧಿ

———

# ಮಹೋಪವಾಸ

೧ ಲಿನ್‌ಲಿತ್‌ಗೋ(ಗೆ
೨ ,,
೩ ದುಃಖದ ಕತೆ
೪ ಅಹಿಂಸಾಸಂಘ
೫ ಒಂದಕ್ಕೆರಡಲ್ಲ, ಹತ್ತು ಸಾವಿರ
೬ ಅಗ್ನಿ ಪರೀಕ್ಷೆ
೭ ಉಪವಾಸ

# ಮಹೋಪವಾಸ

[ ಗಾಂಧೀಜಿ ಪಯಣವಾಗುವ ಮುನ್ನ ಉಪವಾಸಮಾಡಲು ನೀವು ಅವಸರ ಪಡಬೇಡಿರೆಂದು ಅವರನ್ನು ಘನಶ್ಯಾಮದಾಸ ಬಿರ್ಲಾ ಕೇಳಿಕೊಂಡರು. ಅವಸರ ಪಡುವುದಿಲ್ಲೆಂದು ಗಾಂಧೀಜಿ ಅವರಿಗೆ ಭರವಸೆ ಕೊಟ್ಟರು. ಉಪವಾಸದ ವಿಚಾರ ಬಾರದಂತೆ ತಡೆಯಲು ಪ್ರಯತ್ನಿಸುತ್ತಿದ್ದೇನೆ ಎಂದರು. ಆದರೆ ಒಳಗಿನಿಂದ ಸ್ಪಷ್ಟವಾಗಿ ಆವೇಶ ಬಂತೋ, ತಮಗದನ್ನು ತಡೆಯಲಾಗಲಿಕ್ಕಿಲ್ಲ ಎಂದರು. ]

(ಹರಿಜನದಿಂದ)

**ಪ್ರಿಯ ಲಿನ್‌ಲಿತ್‌ಗೋ,**

ಅಗಸ್ಟ್ ೧೪, ೪೨

ಇಷ್ಟು ಅವಸರದಿಂದ ಈ ವಿಷಘಟ್ಟವನ್ನು ತಂದಿಟ್ಟದ್ದು ಭಾರತ ಸರಕಾರದ ತಪ್ಪು. ಈ ಕಾರ್ಯವನ್ನು ಸಮರ್ಥಿಸಲು ಸರಕಾರ ಮಾಡಿದ ತೀರ್ಮಾನ ಬರೀ ತಿರುಗುಮುರುಗು, ಸುಳ್ಳುಗಳ ಕಂತೆ. ಇದಕ್ಕೆ ನಿಮ್ಮ ಭಾರತೀಯ ಸಹೋದ್ಯೋಗಿಗಳ ಸಮ್ಮತಿಯ ಬೆಂಬಲವಿದೆ ಎಂಬುದರಲ್ಲಿ ಮಹತ್ವವೇ ಇಲ್ಲ. ಭಾರತದಲ್ಲಿ ಇಂಥಾ ಬೆಂಬಲ ನಿಮಗೆ ಬೇಡಿದಾಗ ಸಿಗುತ್ತದೆ. ಎಂದು ತಾನೇ ಅದಕ್ಕೆ ವಿರೋಧಬಂದಿದೆ? ಯಾರು ಬೇಕಾದರೂ ಏನೇ ಹೇಳಲಿ? ಕೂಡಲೆ ಬ್ರಿಟಿಷರು ಹೊರಟು ಹೋಗಬೇಕೆಂಬುದಕ್ಕೆ ಈ ಸಹಕಾರವೂ ಇನ್ನೊಂದು ಕಾರಣ; ಮತ್ತೊಂದು ಸಮರ್ಥನೆ.

ನಾನು ಸಾಮೂಹಿಕ ಚಳುವಳಿ ಪ್ರಾರಂಭಿಸುವವರೆಗಾದರೂ ಸರಕಾರ ತಡೆಯಬಹುದಿತ್ತು, ಘಂಟಾಘೋಷವಾಗಿಯೇ ನಾನು ಹೇಳಿದೇನಲ್ಲ; ನಿಶ್ಚಿತವಾದ ಹೆಜ್ಜೆ ಹಾಕುವ ಮೊದಲು ನಿಮಗೆ ಪತ್ರ ಬರೆಯುವ ಯೋಚನೆ ಮಾಡಿದ್ದೇನೆಂದು ತಿಳಿಸಿದ್ದೆ. ಕಾಂಗ್ರೆಸ್ ವಾದವನ್ನು ನಿಷ್ಪಕ್ಷಪಾತವಾಗಿ ವಿಮರ್ಶೆ ಮಾಡಿರೆಂದು ಅದರಲ್ಲಿ ನಿಮ್ಮನ್ನು ಕೇಳಬೇಕೆಂದಿದ್ದೆ. ತನ್ನ ಬೇಡಿಕೆ

ಯಲ್ಲಿ ಏನೇನು ಲೋಪಗಳಿದ್ದವೆಂದು ತಿಳಿದು ಬಂತೋ ಅವನ್ನೆಲ್ಲ ಕಾಂಗ್ರೆಸ್ಸು ಒಡನೆಯೇ ಪೂರ್ಣಮಾಡಿದೆ. ನಿಮಗೇ ಇದು ಗೊತ್ತಿದೆ. ನನಗೆ ನೀವು ಅವಕಾಶ ಕೊಟ್ಟಿದ್ದಿದ್ದರೆ ಎಲ್ಲ ಕ್ಲಿಷ್ಟತೆಯನ್ನೂ ಬಿಡಿಸಲು ಪ್ರಯತ್ನ ಮಾಡುತ್ತಿದ್ದೆ. ಮಿಂಚಿನಂತೆ ಸರಕಾರ ಹಠಾತ್ತಾಗಿ ಮಾಡಿದ ಈ ಕೆಲಸವನ್ನು ನೋಡಿದರೆ ಕಾಂಗ್ರೆಸ್ಸಿನ ಪೂರ್ಣ ಜಾಗರೂಕತೆ, ನಿಧಾನವಾಗಿ ಕ್ರಿಯಾತ್ಮಕ ಚಳುವಳಿಯ ಕಡೆಗೆ ಕಾಂಗ್ರೆಸ್ ಇಡುತ್ತಿದ್ದ ಹೆಜ್ಜೆಗೆ ಲೋಕಾಭಿಪ್ರಾಯ ಅನುಕೂಲವಾದೀತು ಎಂಬ ಹೆದರಿಕೆ ನಿಮಗೆ ಇತ್ತೇನೋ ಅನಿಸುತ್ತದೆ. ಕಾಂಗ್ರೆಸ್ ಬೇಡಿಕೆಯನ್ನು ಸರಕಾರ ತಿರಸ್ಕರಿಸಿದುದರ ಟೊಳ್ಳುವಾದವನ್ನು ಲೋಕ ಚೆನ್ನಾಗಿ ಅರ್ಥಮಾಡಿಕೊಂಡಿದೆ; ಲೋಕಾಭಿಪ್ರಾಯ ಈಗಾಗಲೇ ಕಾಂಗ್ರೆಸ್ಸಿನ ಕಡೆ ಇದೆ. ಅಖಿಲ ಭಾರತ ಕಾಂಗ್ರೆಸ್ ಸಮಿತಿ ತೀರ್ಮಾನ ಮಾಡಿದ ನಂತರ ಶುಕ್ರವಾರ, ಶನಿವಾರ ರಾತ್ರಿ ನಾ ಮಾಡಿದ ಭಾಷಣಗಳ ಅಧಿಕೃತ ವರದಿಗಾಗಿ ಸರಕಾರ ಕಾಯಬಹುದಿತ್ತು. ಆತುರದಿಂದ ನಾನಾವ ಕೆಲಸವನ್ನೂ ಕೈಗೊಳ್ಳುತ್ತಿರಲಿಲ್ಲವೆಂಬುದು ಅದರಲ್ಲಿ ಕಂಡುಬರುತ್ತಿತ್ತು. ಅದರಲ್ಲಿ ಸೂಚಿಸಿದ ಅವಧಿಯನ್ನೂ ನೀವು ಉಪಯೋಗಿಸಿಕೊಂಡು ಕಾಂಗ್ರೆಸ್ ಬೇಡಿಕೆಯನ್ನು ತೃಪ್ತಿಗೊಳಿಸುವ ಸಕಲ ಮಾರ್ಗವನ್ನೂ ಪರಿಶೀಲಿಸಬಹುದಿತ್ತು.

ಸರಕಾರದ ತೀರ್ಮಾನದಲ್ಲಿ ಹೀಗಿದೆ; "ಬುದ್ಧಿ ಬಂದೀತೆಂದು ಬಹಳ ದಿನ ಕಾದಿದ್ದಾಯಿತು. ಭಾರತ ಸರಕಾರಕ್ಕೆ ಇನ್ನು ಆಶೆಯಿಲ್ಲ." ಬುದ್ಧಿ ಬಂದೀತು ಎಂದರೆ ಕಾಂಗ್ರೆಸ್ ತನ್ನ ಬೇಡಿಕೆಯನ್ನು ಬಿಟ್ಟೀತು ಎಂದರ್ಥವಿರಬೇಕು. ನ್ಯಾಯವಾದ ಈ ಬೇಡಿಕೆಯನ್ನು ಕಾಂಗ್ರೆಸ್ ಬಿಡಬೇಕೆಂದು ಸರಕಾರ ಏಕೆ ಬಯಸಬೇಕು? ಈ ಬೇಡಿಕೆ ಇದಿರು ಪಕ್ಷದ ಜೊತೆಗೆ ಸಾವಧಾನವಾಗಿ ಚರ್ಚೆ ಮಾಡಲಾರದಂಥ, ಕೂಡಲೇ ದಬ್ಬಾಳಿಕೆ ನಡೆಸಬೇಕಾದಂಥ ವಿಷಯವೇ? ಅದನ್ನೊಪ್ಪಿಕೊಂಡರೆ "ಭಾರತ ದೇಶ ಅಲ್ಲೋಲ ಕಲ್ಲೋಲವಾಗಿ ಗೊಂದಲದಲ್ಲಿ ಮುಳುಗೀತು." ಎಂದು ಹೇಳುವುದು ಮಾನವ ಜಾತಿಯ ವಿಶ್ವಾಸಪೂರ್ಣತೆಯನ್ನು ಅತಿದೂರ ನಂಬಿದ ಹಾಗೆ. ಅದೇನೇ ಇರಲಿ; ಸದ್ಯ ಕಾಂಗ್ರೆಸ್ ಬೇಡಿಕೆಯ ನಿರಾಕರಣೆಯೇನೋ ದೇಶವನ್ನು, ಸರಕಾರವನ್ನು ಗೊಂದಲದಲ್ಲಿ ಮುಳುಗಿಸಿರುವುದು ಮಾತ್ರ ನಿಜ

ಕಾಂಗ್ರೆಸ್ಸು ಮಿತ್ರಪಕ್ಷದೊಂದಿಗೆ ಏಕವಾಗಲು ಸರ್ವ ಪ್ರಯತ್ನವನ್ನೂ ಮಾಡುತ್ತಿತ್ತು.

ತೀರ್ಮಾನದಲ್ಲಿ ಹೀಗೂ ಇದೆ: "ಕಾಂಗ್ರೆಸ್ ಪಕ್ಷದವರು ಕೆಲವು ಕಾಲದಿಂದ ಶಾಸನ ವಿರೋಧವಾದ ಹಿಂಸಾ ಕೃತ್ಯಗಳಿಗೆ ಏರ್ಪಾಟು ಮಾಡಿ ಕೊಳ್ಳುತ್ತಿದ್ದಾರೆ; ಪ್ರಯಾಣ ಸೌಕರ್ಯಗಳ ನಿರೋಧ, ಮುಷ್ಕರ, ಸರಕಾರೀ ನೌಕರರೊಡನೆ ರಾಜದ್ರೋಹದ ಪಿತೂರಿ, ಸಂರಕ್ಷಣೆಯ ಪ್ರಯತ್ನಕ್ಕೆ ಭಂಗ ಮುಂತಾದುವನ್ನು ಯೋಚಿಸಿದಾರೆ. ಇದು ಗೌರ್ನರ್ ಜನರಲ್ಲಿಗೆ ಗೊತ್ತಿದೆ." ಇದು ಸತ್ಯದ ಸಂಪೂರ್ಣ ವಿಪರ್‍ಯಾಸ. ಯಾವಾಗಲೂ, ಯಾವ ಮಜಲಿನಲ್ಲೂ ನಾವು ಹಿಂಸೆಯನ್ನು ಯೋಚಿಸುತ್ತಿರಲಿಲ್ಲ. ಅಹಿಂಸಾ ಕೃತಿಯಲ್ಲಿ ಏನನ್ನು ಸೇರಿಸಬಹುದೋ ಅದನ್ನೇ ಸೂಕ್ಷ್ಮವಾಗಿ ದುಷ್ಟರೀತಿ ಯಲ್ಲಿ ವರ್ಣಿಸಲಾಗಿದೆ. ಕಾಂಗ್ರೆಸ್ಸು ಹಿಂಸೆಗೆ ಸಿದ್ಧವಾಗಿ ನಿಂತಿದೆಯೇನೋ, ಎಂಬ ಹಾಗೆ ಹೇಳಲಾಗಿದೆ. ಕಾಂಗ್ರೆಸ್ ಗುಂಪಿನಲ್ಲಿ ಎಲ್ಲವನ್ನೂ ಬಹಿರಂಗ ವಾಗಿಯೇ ಚರ್ಚಿಸಿತ್ತು; ರಹಸ್ಯವಾಗಿ ಏನೂ ಮಾಡುವಂತಿರಲಿಲ್ಲ. ಬ್ರಿಟಿಷ್ ಜನರಿಗೆ ವಿಘಾತಕರವಾದ ಕೆಲಸವನ್ನು ಬಿಟ್ಟುಬಿಡಿರೆಂದು ನಿಮಗೆ ನಾ ಹೇಳಿದರೆ ಅದು ನಿಮ್ಮ ರಾಜಭಕ್ತಿಗೆ ಕಂಟಕವಾದೀತೇ?

ಕಾಂಗ್ರೆಸ್ ನಾಯಕರ ಬೆನ್ನ ಹಿಂದೆ ಇಂಥ ಅಪಪ್ರಚಾರದ ಮಾತನ್ನು ಪ್ರಕಟಿಸುವ ಬದಲು ಈ 'ಸಿದ್ಧತೆ' ಆದಕೂಡಲೇ ಆಯಾ ಜನರನ್ನು ಶಿಕ್ಷಿಸ ಬೇಕಾಗಿತ್ತು. ಅದು ಸರಿಯಾದ ದಾರಿ. ಈ ತೀರ್ಮಾನದಲ್ಲಿ ಇಂಥ ನಿರಾಧಾರವಾದ ನಿಂದೆಮಾಡಿ ಅನ್ಯಾಯಕ್ಕೆ ಮಡಿಯಲು ಕಟ್ಟಿಕೊಂಡಿದೀರಿ.

ಜನರಲ್ಲಿ ಸಾಕಷ್ಟು ತ್ಯಾಗ ಅರಳಿಸಿ ಎಲ್ಲರ ಲಕ್ಷ್ಯ ಸೆಳೆಯುವಂತೆ ಮಾಡುವುದು ಕಾಂಗ್ರೆಸ್ ಚಳುವಳಿಯ ಉದ್ದೇಶವಾಗಿತ್ತು. ಕಾಂಗ್ರೆಸ್ಸಿಗೆ ಜನ ಬೆಂಬಲ ಎಷ್ಟಿದೆ ಎಂಬುದನ್ನು ತೋರಿಸಲು ಅದನ್ನು ಹೂಡಬೇಕಾ ಗಿತ್ತು. ಅಹಿಂಸೆಯನ್ನು ಸರ್ವವಿಧದಲ್ಲೂ ನಂಬಿದ ಸಾರ್ವಜನಿಕ ಚಳುವಳಿ ಯೊಂದನ್ನು ಈ ಸಂದರ್ಭದಲ್ಲಿ ಅದುಮಿಹಾಕಲು ಪ್ರಯತ್ನಮಾಡಿದುದು ವಿವೇಕವೇ?

ಸರಕಾರದ ತೀರ್ಮಾನದಲ್ಲಿ "ಕಾಂಗ್ರೆಸ್ಸೇನು ಭಾರತದ ವಾಣಿಯಲ್ಲ. ತಮ್ಮ ಸ್ವಂತ ಪ್ರಾಧಾನ್ಯಕ್ಕಾಗಿ ತಮ್ಮ ಸರ್ವಾಧಿಕಾರಿತ್ವದ ನೀತಿಗಾಗಿ ಭಾರತ ತನ್ನ ಪರಿಪೂರ್ಣತೆ ಪಡೆಯಲು ಅವಕಾಶಕೊಡದೆ ಅಡ್ಡಿ ನಿಂತಿದ್ದಾರೆ ಕಾಂಗ್ರೆಸ್ ನಾಯಕರು; ಯಾವಾಗಲೂ ಹೀಗೆಯೇ" ಎಂದು ಹೇಳಿದೆ. ಭಾರತದಲ್ಲಿ ಎಲ್ಲಕ್ಕಿಂತಲೂ ಹಳೆಯದಾದ ಈ ಸಂಸ್ಥೆಯನ್ನು ಹೀಗೆ ನಿಂದಿಸುವುದು ಅವ ಹೇಳನ. ಸ್ವಾತಂತ್ರ್ಯಕ್ಕಾಗಿ ಮಾಡಿದ ರಾಷ್ಟ್ರೀಯ ಪ್ರಯತ್ನ ಎಲ್ಲವನ್ನೂ ಸದಾ ಅಡ್ಡಿಗೊಳಿಸಿ, ಏನಕೇನ ಕಾಂಗ್ರೆಸ್‌ನ್ನು ತುಳಿಯಲು ಯತ್ನಿಸಿದ—ಅಚ್ಚಾದ ಕಾಗದ ಪತ್ರದಿಂದ ಅದನ್ನು ಸಿದ್ಧಮಾಡಬಹುದು—ಸರಕಾರದ ಬಾಯಿಂದ ಇಂಥ ಮಾತು ಬರಬಾರದು.

ಸ್ವಾತಂತ್ರ್ಯದ ಘೋಷಣೆ ಮಾಡಿದಾಗ ಜೊತೆಯಲ್ಲಿಯೇ ಕಾಂಗ್ರೆಸ್ಸಿಗೆ ತಾತ್ಕಾಲಿಕ ಸರಕಾರವನ್ನು ರಚಿಸುವ ಅವಕಾಶವನ್ನು ಕೊಡಲಿಷ್ಟವಿಲ್ಲದಿದ್ದರೆ, ಮುಸ್ಲಿಂಲೀಗನ್ನೇ ಕೇಳಲಿ, ಮುಸ್ಲಿಂಲೀಗ ರಚಿಸಿದ ರಾಷ್ಟ್ರೀಯ ಸರಕಾರವನ್ನು ಕಾಂಗ್ರೆಸ್ ಅಂಗೀಕರಿಸೀತು ಎಂದು ಕಾಂಗ್ರೆಸ್ ಹೇಳಿದುದನ್ನು ಭಾರತ ಸರಕಾರ ಗಮನಿಸುವ ಕೃಪೆ ಮಾಡಲಿಲ್ಲ. ಈ ಹೇಳಿಕೆಯಲ್ಲಿ, ಈ ಸರ್ವಾಧಿಕಾರಿತ್ವದ ಆಕ್ಷೇಪಣೆಯಲ್ಲಿ ಒಂದಕ್ಕೊಂದು ಪೂರ್ವ ಪಶ್ಚಿಮದಂತೆ.

ನೀವು ಭಾರತಕ್ಕೆ ಕೊಡಲೆಳಿಸಿದುದನ್ನೇ ಸ್ವಲ್ಪ ಹಿಂಜಿನೋಡಿ. 'ಯುದ್ಧ ಮುಗಿದೊಡನೆ ಎಲ್ಲ ಪಕ್ಷಗಳನ್ನೂ ಒಳಪಡಿಸಿಕೊಂಡು ತನಗೆ ಸರಿದೋರಿದ ರೀತಿಯ ಸರಕಾರವನ್ನು ಸ್ಥಾಪಿಸಿಕೊಳ್ಳಲು ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ಕೊಡಲ್ಪಡುವುದು' ಎಂದು ಹೇಳಿದಿರಿ. ಇದರಲ್ಲೇನಾದರೂ ಸತ್ಯವಿದೆಯೆ? ಈಗ ಎಲ್ಲಾ ಪಕ್ಷಗಳಲ್ಲೂ ಒಮ್ಮತವಿಲ್ಲ; ನಿಜ. ಇನ್ನು ಸ್ವಾತಂತ್ರ್ಯ ಬರುವ ಮುನ್ನ, ಯುದ್ಧ ಮುಗಿದ ಮೇಲಾದರೂ ಒಮ್ಮತ ಬಂದೀತೆ? ಪ್ರಾತಿನಿಧ್ಯವಿಲ್ಲದ ಪಕ್ಷಗಳು ನಾಯಿಕೊಡೆಯಂತೆ ಬೆಳೆದಾವು. ಅವು ಬಾಯಲ್ಲಿ ಸ್ವಾತಂತ್ರ್ಯವನ್ನು ಬೇಡಿ ಕೃತಿಯಲ್ಲಿ ಕಾಂಗ್ರೆಸ್ಸನ್ನು ವಿರೋಧಿಸಿದರೆ ಸರಕಾರ ಅವನ್ನು ತೆರೆದ ಕೈಯಿಂದ ಸ್ವಾಗತಿಸೀತು. ಹಿಂದೆ ಹಾಗೆ ಮಾಡಲಿಲ್ಲವೆ? ವಿಫಲತೆ ಸ್ಪಷ್ಟವಾಗೇ ಅಡಗಿದೆ ಸರಕಾರದ ದಾನದಲ್ಲಿ. ಅದಕ್ಕೆ ಮೊದಲು ಭಾರತ ಬಿಟ್ಟು ಹೊರಡಿ ಎಂದದ್ದು. ತರ್ಕಸತ್ಯ ಈ ಮಾತು. ತಾತ್ಕಾಲಿಕವೇ ಆಗಲಿ

ಸ್ಥಿರವೇ ಆಗಲಿ, ನಿಜವಾಗಲೂ ಜನರ ಪ್ರತಿನಿಧಿಯಾದ ಸರಕಾರ ಸ್ಥಾಪಿತವಾಗಬೇಕೆಂದರೆ ಭಾರತದ ರಾಜಕೀಯ ಸ್ಥಾನ ಗುಲಾಮಗಿರಿಯಿಂದ ಸ್ವಾತಂತ್ರ್ಯ ಶ್ರೇಣಿಗೆ ಏರಿದರೇನೇ ಸಾಧ್ಯ; ಬ್ರಿಟಿಷರು ಭಾರತ ಬಿಟ್ಟು ಹೊರಟ ಮೇಲೆ ಸಾಧ್ಯ.

ಇದನ್ನು ಬೇಡಿದಾತನನ್ನು ಸೆರೆಯ ಜೀವಂತ ಸಮಾಧಿಗೆ ದೂಡಿದ ಮಾತ್ರಕ್ಕೆ ತೊಡಕು ಬಿಡಿಸಿದಂತಾಗಲಿಲ್ಲ; ಪ್ರತಿಯಾಗಿ ಇದ್ದುದ್ದೂ ತೊಡಕಾಗಿದೆ, ವಿಷಮಿಸಿದೆ.

ಅದೇ ತೀರ್ಮಾನದಲ್ಲಿ ಹೀಗೂ ಹೇಳಿದೀರಿ: "ಆಕ್ರಮಣಕಾರರ ಬಲೆಗೆ ಸಿಕ್ಕಿ ಎಷ್ಟೋ ದೇಶ ಹಾಳಾಗಿವೆ; ಈ ದುರಂತ ಉದಾಹರಣೆ ಕಂಡೂ ಭಾರತದ ಜನಕೋಟಿ ಭವಿಷ್ಯದ ಅನಿರ್ದಿಷ್ಟತೆಯಿಂದಾಗಿ ದಾಳಿಗಾರರ ಮಿತ್ರತ್ವ ಬಯಸಬಹುದೆಂದು ಕಾಂಗ್ರೆಸ್ ಸೂಚಿಸುವುದು. ಭಾರತದ ಜನಕೋಟಿಯ ಮನೋಭಾವ ಎಂದು ಒಪ್ಪಲು ಸರಕಾರ ಸಿದ್ಧವಾಗಿಲ್ಲ." ಜನಕೋಟಿಯ ವಿಚಾರ ನಾನರಿಯೆ; ಪತ್ರಿಕೆಗಳಿಗೆ ಹೇಳಿಕೆ ಕೊಡುವುದು ಮಾತ್ರ ನಾ ಬಲ್ಲೆ. ಕಾಂಗ್ರೆಸ್ಸಿನ ಮಾತು ನಂಬುವುದೂ ಬಿಡುವುದೂ ಸರಕಾರಕ್ಕೆ ಸೇರಿದ್ದು. ಸಾವು ಸನ್ನಿಹಿತವಾಗಿದೆಯೆಂದರಿಯಲು ಯಾವ ಸಾಮ್ರಾಜ್ಯಕ್ಕೂ ಇಷ್ಟವಿಲ್ಲ. ಉಳಿದ ಸಾಮ್ರಾಜ್ಯಗಳ ಗತಿ ಬ್ರಿಟನ್ನಿಗೆ ಬರಬಾರದೆಂದು ಕಾಂಗ್ರೆಸ್ಸಿನ ಬಯಕೆಯಿದೆ. ಅದಕ್ಕೆ ಭಾರತ ಸ್ವತಂತ್ರವೆಂದು ಸಾರಿ ಈ ಸಾಮ್ರಾಜ್ಯ ಮೋಹವನ್ನು ತ್ಯಾಗಮಾಡಿ ಎಂದು ಬ್ರಿಟನ್ನನ್ನು ಕೇಳುತ್ತಿದೆ. ಕಾಂಗ್ರೆಸ್ಸು ಚಳುವಳಿ ಹೂಡಿದ್ದು ಶುದ್ಧ ಗೆಳೆತನದ ಭಾವನೆಯಿಂದಲೇ. ಕಾಂಗ್ರೆಸ್ ಸಾಮ್ರಾಜ್ಯವಾದವನ್ನು ಕೊಲ್ಲಬಯಸಿದ್ದು, ಭಾರತಕ್ಕಾಗಿ ಮಾತ್ರವಲ್ಲ ಬ್ರಿಟನ್ನಿಗಾಗಿ, ಇಡೀ ಮಾನವ ಕೋಟಿಯ ಕಲ್ಯಾಣಕ್ಕಾಗಿ.

ಪ್ರತಿವಾದ ಸಾವಿರ ಹೇಳಬಹುದು. ನಾ ದೃಢವಾಗಿ ಹೇಳುತ್ತೇನೆ; ಕಾಂಗ್ರೆಸ್ಸಿಗೆ ಭಾರತವನ್ನು ಇಡೀ ಜಗತ್ತನ್ನು ಬಿಟ್ಟು ತನ್ನ ಸ್ವಂತ ಹಿತ ಏನೂ ಇಲ್ಲ.

ಸರಕಾರದ ತೀರ್ಮಾನವಲ್ಲಿ ಈ ವಾಗ್ಜಾಲ ವಿಚಿತ್ರವಾಗಿದೆ. 'ಭಾರತ ವನ್ನು ರಕ್ಷಿಸುವ ಭಾರ, ಭಾರತದ ಯುದ್ಧ ಶಕ್ತಿಯನ್ನು ಊರ್ಜಿತಗೊಳಿಸು ವುದು, ಭಾರತದ ಹಿತರಕ್ಷಣೆ, ಹಲವಾರು ಪಂಗಡಗಳನ್ನು ಯಾರಲ್ಲೂ ಮೆಚ್ಚಿಗೆ ತೋರಿಸದೆ ಯಾರನ್ನೂ ದ್ವೇಷಿಸದೆ ಸಮಾನದೃಷ್ಟಿಯಿಂದಾಳುವ ಕರ್ತವ್ಯ ಸರಕಾರದ್ದು.' ಮಲಯಾ, ಸಿಂಗಪೂರ, ಬರ್ಮಾಗಳಲ್ಲಿ ಆದದ್ದನ್ನು ನೋಡಿದರೆ ಈ ಮಾತು ಸತ್ಯದ ಅಣಕ; ಅಷ್ಟೇ. ಭಿನ್ನ ಪಕ್ಷಗಳಲ್ಲಿ ಸಮಾನತೆ ತೋರುವ ಕರ್ತವ್ಯ ತಮ್ಮದೆಂದು ಸರಕಾರ ಹೇಳುವ ಮಾತು ಶೋಚನೀಯ. ಈ ಪಕ್ಷಗಳನ್ನು ಕಡೆದು ಮೂಡಿಸಿದವರೇ ಸರಕಾರದವರು. ಈ ಹೊಗೆ ಕಣ್ಣಿಗೆ ಕಾಣುವಂಥದು; ಎಲ್ಲರಿಗೂ ಗೊತ್ತಿದ್ದುದೆ.

ಇನ್ನೊಂದು ಮಾತು. ಯುದ್ಧದ ಗುರಿ ಇಬ್ಬರಿಗೂ ಒಂದೆ. ಸ್ಪಷ್ಟ ವಾಗಿ ಹೇಳಬೇಕಾದರೆ ಚೀನಾ ರಷ್ಯಾಗಳ ಸ್ವಾತಂತ್ರ್ಯ ರಕ್ಷಣೆಯೇ ಆ ಗುರಿ. ಈ ಧ್ಯೇಯಸಾಧನೆಗೆ ಭಾರತ ಸ್ವಾತಂತ್ರ್ಯ ಅಗತ್ಯವೆಂದೆನಿಸಿಲ್ಲ ಸರಕಾರಕ್ಕೆ. ನನ್ನದು ಅದಕ್ಕೆ ತೀರಾ ವಿರೋಧ ದೃಷ್ಟಿ. ಜಹಾಹರಲಾಲ ನೆಹರೂ ಇದರಲ್ಲಿ ನನ್ನ ಅಳತೆಗೋಲು. ಚೀನಾ ರಷ್ಯಾಕ್ಕೆ ಕಾದು ಕುಳಿತ ವಿನಾಶಕ್ಕೆ ನನಗಿಂತಾ ನಿಮಗಿಂತಾ ಹೆಚ್ಚು ದುಃಖವನ್ನುಂಟು ಮಾಡಿದೆ ಆತನಿಗೆ. ಈ ದುಃಖದ ತೀವ್ರತೆಯಲ್ಲಾತ, ಸಾಮ್ರಾಜ್ಯವಾದದೊಂದಿಗೆ ತಾ ಹೂಡಿದ್ದ ಹಳೇ ವ್ಯಾಜ್ಯ ವನ್ನೂ ಮರೆಯಲೆತ್ನಿಸಿದೆ. ಫ್ಯಾಸಿಸ್ಟರ, ನಾಜಿಗಳ ಜಯವೆಂದರೆ ನಮ್ಮೆಲ್ಲರಿ ಗಿಂತ ಹೆಚ್ಚಿನ ಹೆದರಿಕೆ ಆತನಿಗೆ. ಹತ್ತಾರು ದಿನ ವಾದಿಸಿ ನಾನಿದನ್ನು ಕಂಡುಕೊಂಡಿದ್ದೇನೆ. ನನ್ನೊಡನೆ ಆತ ವಾದಿಸಿದಾಗ ಇದ್ದ ಭಾವದ ತೀವ್ರತೆ ಯನ್ನು ನಾ ಬಣ್ಣಿಸಲಾರೆ; ಮಾತಿಗೆ ಆ ಶಕ್ತಿ ಇಲ್ಲ. ಆದರೆ ಆತನೂ ತರ್ಕಕ್ಕೆ ಸೋತುಹೋದ; ಸತ್ಯದ ಮುಂದೆ ತಲೆಬಾಗಿದ ಭಾರತಕ್ಕೆ ಸ್ವಾತಂತ್ರ್ಯ ಬಾರದಲ್ಲಿ ಅವೆರಡು ದೇಶಗಳ ಸ್ವಾತಂತ್ರ್ಯಕ್ಕೆ ಆಪತ್ತು ಅನಿವಾರ್ಯ ಎಂದು ಸ್ಪಷ್ಟವಾಗಿ ಅರಿವಾದಾಗ, ನನ್ನ ಮಾತಿಗೆ ಒಪ್ಪಿದ. ಅಂತಹ ಗೆಳೆಯನನ್ನು ಶಕ್ತಿಶಾಲಿ ಮಿತ್ರನನ್ನು ಸೆರೆಯಲ್ಲಿರಿಸಿದುದು ನಿಜವಾಗಿಯೂ ದೊಡ್ಡ ತಪ್ಪು.

ಗುರಿ ಒಂದೇ ಆಗಿದ್ದೂ, ಕಾಂಗ್ರೆಸ್ಸಿನ ಬೇಡಿಕೆಗೆ ಈ ಅವಸರದ ತುಳಿತವೇ ಸರಕಾರದ ಉತ್ತರವಾದಲ್ಲಿ ಬ್ರಿಟಿಷ್ ಸರಕಾರಕ್ಕೆ ಮಿತ್ರಪಕ್ಷಗಳ

ಹಿತಕ್ಕಿಂತಲೂ, ಅದರ ಸಾಮ್ರಾಜ್ಯ ಧೋರಣೆಯ ಮುಖ್ಯ ನೀತಿಯಾದ, ಕೈಗೆ ಬಿದ್ದ ಭಾರತವನ್ನು ಉಳಿಸಿಕೊಳ್ಳುವ ಹಟವೇ ಹೆಚ್ಚಿನದಾಯಿತೆಂದು ನಾ ಹೇಳಿದರೆ ಅವರಿಗೂ ಅಚ್ಚರಿಯಾಗದು.

ಕಾಂಗ್ರೆಸ್ ಬೇಡಿಕೆಯ ತಿರಸ್ಕಾರ, ಈ ಅಸಹ್ಯ ದಬ್ಬಾಳಿಕೆ ಎಲ್ಲಕ್ಕೂ ಈ ಹಟವೇ ಕಾರಣ. ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಬೃಹದಾಕಾರದಲ್ಲಾಗುತ್ತಿರುವ ಪರಸ್ಪರ ಕಗ್ಗೊಲೆಯೇ ಸಾಕು, ನೋಡಿ ಪ್ರಾಣ ಹೋಗಲು ಈ ಕೊಲೆಯ ಜೊತೆಗೆ ಸತ್ಯದ ಹತ್ಯೆ, ಸುಳ್ಳು ..ಸರ್ಕಾರದ ತೀರ್ಮಾನದಲ್ಲಿದು ತುಂಬಿತುಳುಕುತ್ತಿದೆ–ಇದೆಲ್ಲದರಿಂದ ಕಾಂಗ್ರೆಸ್ಸಿನ ಸ್ಥಾನ ಮತ್ತಷ್ಟು ದೃಢವಾಗುತ್ತಿದೆ.

ಇಷ್ಟು ದೀರ್ಘವಾದ ಪತ್ರಬರೆಯಬೇಕಾಗಿ ಬಂದುದಕ್ಕಾಗಿ ನನಗೇ ತುಂಬಾ ವ್ಯಥೆಯಾಗಿದೆ. ನಿಮ್ಮ ಕೃತಿ ನನಗೆಷ್ಟೇ ಅಪ್ರಿಯವಾದರೂ, ಹಿಂದಿದ್ದಷ್ಟೇ ಇಂದೂ ನಾ ನಿಮ್ಮ ಗೆಳೆಯ. ಸರಕಾರದ ಧೋರಣೆಯನ್ನು ಬದಲಿಸಬೇಕೆಂದು ನಾ ಕೇಳುತ್ತೇನೆ ಬ್ರಿಟಿಷ್ ಜನರ ನಂಬುಗೆಯ ಗೆಳೆಯ ನಾನೆಂಬಾತನ ಮಾತನ್ನು ತೀರಾ ನಿರ್ಲಕ್ಷಿಸಬೇಡಿ. ದೇವರು ನಿಮಗೆ ದಾರಿ ತೋರಲಿ

ನಿಮ್ಮ ನಂಬಿಗೆಯ,
ಮೋ. ಕ. ಗಾಂಧಿ

೨

ಸೆಪ್ಟೆಂಬರ್ ೨೩, ೪೨

ಮಹಾಶಯ,

ಕಾಂಗ್ರೆಸ್ಸಿನ ಬಗ್ಗೆ ಸರಕಾರ ತೋರುತ್ತಿರುವ ಧೋರಣೆಗೆ ಕೌನ್ಸಿಲ್ಲಿನ ಸದಸ್ಯರು ಒಪ್ಪಿಗೆಯ ತಾಳಹಾಕಿದ್ದರೂ ವೈಸರಾಯರಿಗೆ ನಾ ಬರೆಯಬೇಕೆಂದಿದ್ದ ಕಾಗದ ಬರೆಯುವವರೆಗೆ ಸರಕಾರ ಕೈ ತಡೆದಿದ್ದರೆ ದೇಶದಲ್ಲಿ ಯಾವ ಅನಾಹುತವೂ ಆಗುತ್ತಿರಲಿಲ್ಲ. ನಾನು ಧೈರ್ಯವಾಗಿ, ದೃಢವಾಗಿ

ಈ ಮಾತು ಹೇಳುತ್ತೇನೆ. ಪತ್ರಿಕೆಗಳಲ್ಲಿ ವರದಿಯಾಗಿರುವ ಹೀನ ವಿನಾಶ ಕಾರ್ಯ ಖಂಡಿತ ಆಗುತ್ತಿರಲಿಲ್ಲ.

ಪ್ರತಿ ಏನೇ ಹೇಳಿದರೂ, ಹಿಂದಿನಂತೆ ಇಂದೂ ಸ್ಪಷ್ಟವಾಗಿ ಅಹಿಂಸೆಯೇ ಕಾಂಗ್ರೆಸ್ಸಿನ ನೀತಿ. ಕಾಂಗ್ರೆಸ್ ನಾಯಕರ ಸಾಮೂಹಿಕ ಬಂಧನದ ಉದ್ರೇಕ ಜನರನ್ನು ಸಂಯಮ ತಪ್ಪಿಸಿ ಕೆರಳಿಸಿರಬೇಕು.

ಈಗಾಗಿರುವ ವಿನಾಶ ಕಾರ್ಯದ ಜವಾಬ್ದಾರಿ ಸರಕಾರದ್ದು, ಕಾಂಗ್ರೆಸ್ಸಿನದಲ್ಲ ಎಂದೇ ನನಗನಿಸುತ್ತದೆ. ಸರಕಾರ ಅನುಸರಿಸಬಹುದಾದ ಒಂದೇ ಸುಮಾರ್ಗವೆಂದರೆ, ಕೂಡಲೇ ಎಲ್ಲಾ ಕಾಂಗ್ರೆಸ್ ನಾಯಕರನ್ನೂ ವಿಮುಕ್ತರನ್ನಾಗಿ ಮಾಡಿ, ದಬ್ಬಾಳಿಕೆಯ ಆಜ್ಞೆಗಳನ್ನು ಉಪಸಂಹರಿಸಿ ಸಂಧಾನ ಸೌಹಾರ್ದಕ್ಕೆ ಮಾರ್ಗಮಾಡಿ ಹುಡುಕುವುದೆಂದೇ ನನಗೆ ತೋರುತ್ತದೆ.

ಹಿಂಸೆಯ ಯಾವ ದುಷ್ಕೃತ್ಯವನ್ನಾದರೂ ತಡೆಯಬಲ್ಲಶಕ್ತಿ ಖಂಡಿತ ವಾಗಿಯೂ ಸರಕಾರಕ್ಕಿತ್ತು. ದಮನದಿಂದ ಅಶಾಂತಿ, ದ್ವೇಷ ಬೆಳೆದಾವೇ ಹೊರತು ತಗ್ಗದು.

ನನಗೀಗ ವೃತ್ತಪತ್ರಿಕೆಗಳನ್ನು ಕೊಡುತ್ತಿದ್ದೀರಿ. ದೇಶದಲ್ಲಿ ನಡೆ ಯುತ್ತಿರುವ ದುರಂತಗಳಿಂದ ನನ್ನ ಮೇಲೆ ಏನು ಪರಿಣಾಮವಾಗಿದೆಯೆಂದು ತಿಳಿಸಬೇಕಾದದ್ದು ಸರಕಾರಕ್ಕೆ ಹೊತ್ತ ಋಣ. ನಾನು ಸೆರೆಯಾಳು ನನಗೀ ರೀತಿ ಕಾಗದ ಬರೆಯಲು ಅಧಿಕಾರವಿಲ್ಲೆಂದರೆ ಈ ತಪ್ಪು ಮತ್ತೆ ಆಗದು.

ನಿಮ್ಮವ,
ಮೋ. ಕ. ಗಾಂಧಿ

## ದುಃಖದ ಕತೆ

ಡಿಸೆಂಬರ್ ೩೧, ೪೨
ಹೊಸ ವರ್ಷದ ಹೊಸಲಲ್ಲಿ

ಪ್ರಿಯ ಲಿನ್‌ಲಿತ್‌ಗೋ,

ಇದು ಕೇವಲ ಆತ್ಮೀಯ ಪತ್ರ. ಬೈಬಲ್ಲಿನ ವಾಕ್ಯಕ್ಕೆ ವಿರೋಧವಾಗಿ ನಿಮ್ಮ ಮೇಲೆ ನಾ ಹೂಡಿರುವ ಕಲಹದಲ್ಲಿ ಎಷ್ಟೋ ದಿನ ಹಾಗೆಯೇ ಸೂರ್ಯ ಮುಳುಗಿ ಹೋಗುವಂತೆ ಮಾಡಿದ್ದೇನೆ. ಆದರೆ ಈ ವರ್ಷ ಮುಗಿಯುತ್ತಾ ಬಂದಿದೆ; ನನ್ನ ಹೃದಯದಲ್ಲಿ ನಿಮ್ಮ ಬಗ್ಗೆ ಏನು ಭಾವನೆ ಗಸಿಗಟ್ಟಿಕೊಂಡಿವೆಯೋ ಅದನ್ನು ಬಿಚ್ಚಿ ಹೇಳದೆ ಈ ವರ್ಷವನ್ನು ಮುಗಿಯಗೊಡಲಾರೆ. ನಾವಿಬ್ಬರೂ ಗೆಳೆಯರೆಂದು ನಾ ತಿಳಿದಿದ್ದೆ, ಈಗಲೂ ಹಾಗೆಯೇ ತಿಳಿಯ ಬಯಸುತ್ತೇನೆ. ಆದರೆ ಆಗಸ್ಟ್ ೯ರಿಂದೀಚೆಗೆ ನಡೆದುದೆಲ್ಲಾ ನನಗೆ ಅಚ್ಚರಿಯುಂಟುಮಾಡಿದೆ. ನನ್ನನ್ನು ಗೆಳೆಯನೆಂದು ಇನ್ನೂ ಭಾವಿಸಿದ್ದೀರೆಂದು ಅನಿಸುತ್ತದೆ. ನಿಮ್ಮ ಗಾದಿಯನ್ನು ಏರಿದ್ದ ಯಾರ ಸಂಗಡಲೂ ನಾನಿಷ್ಟು ಸಮೀಪ ಸಂಬಂಧವನ್ನು ಪಡೆದಿರಲಿಲ್ಲ.

ನನ್ನ ದಸ್ತಗಿರಿ, ತರುವಾಯ ನೀವು ಹೊರಡಿಸಿದ ಪ್ರಕಟನೆ, ರಾಜಾಜಿಗೆ ನೀವು ಕೊಟ್ಟ ಉತ್ತರ, ಅದಕ್ಕೆ ನೀವು ಕೊಟ್ಟ ಕಾರಣ, ಅಮೇರಿ ನನ್ನ ಮೇಲೆ ಬಿಟ್ಟ ಬಾಣ, ಇನ್ನೂ ಎಷ್ಟೋ ಇವೆ; ಈ ಪಟ್ಟಿಯನ್ನೆಲ್ಲಾ ನೋಡಿದರೆ ಯಾವಾಗಲೋ ಒಮ್ಮೆ, ಈ ನಡುವೆ, ನನ್ನ ಪ್ರಾಮಾಣಿಕತೆಯನ್ನು ನೀವು ನಂಬಲಿಲ್ಲವೆಂದು ನನಗನಿಸುತ್ತದೆ. ಈ ಸಂದರ್ಭದಲ್ಲಿ ಉಳಿದ ಕಾಂಗ್ರೆಸ್ ಜನರ ಹೆಸರು ಬಂದರೆ ಅದು ತೀರ ಪ್ರಾಸಂಗಿಕ. ಕಾಂಗ್ರೆಸ್ಸಿನ ಮೇಲೆ ಹೊರಿಸಿರುವ ಎಲ್ಲ ಪಾಪಕ್ಕೂ ನಾನೇ ಮೂಲ ಕಾರಣನೆಂದು ನೀವು ತಿಳಿದಿರುವ ಹಾಗಿದೆ. ನನ್ನ ನಿಮ್ಮ ಗೆಳೆತನ ಕಡಿದಿರದಿದ್ದರೆ ಇಂಥ ಘೋರ ಕೃತ್ಯ ಮಾಡುವ ಮೊದಲು ನನ್ನನ್ನೇಕೆ ಕರೆಸಬಾರದಾಗಿತ್ತು. ನಿಮ್ಮ ಸಂಶಯ ತಿಳಿಸಿ ಸತ್ಯ ತಿಳಿದುಕೊಳ್ಳಬಾರದಾಗಿತ್ತೇ? ಇತರರು ನನ್ನನ್ನು ನೋಡುವಂತೆ ನನ್ನನ್ನೇ ನಾನು ಸಾಕ್ಷಿಯಾಗಿ ನೋಡಿಕೊಳ್ಳಬಲ್ಲೆ; ಆ ಸಾಮರ್ಥ್ಯ ನನಗಿದೆ.

ಮಾಡಿದ ಕೃತ್ಯಗಳನ್ನು ನಾನು ನಿಷೇಧಿಸಲು ವೈಸರಾಯರು ಸೂಚಿಸುತ್ತಿದ್ದಾರೆ. ನಾನು ಒಂದು ವೇಳೆ ಮಿತ್ರದ್ರೋಹವನ್ನು ಬಗೆದರೂ ರಾಷ್ಟ್ರದ ಮಹತ್ವದ ಪ್ರಶ್ನೆಯ ವಿಷಯವಾಗಿ ನನ್ನೊಡನೆ ಚರ್ಚಿಸಲಿಕ್ಕೂ ಅವರು ಸಿದ್ಧರಿಲ್ಲ.

ಈ ಸುಲ್ತಾನಿ ಕಾಯಿದೆ ಹಾಗು ಅಧಿಕಾರಿಗಳ ಕೃತ್ಯಗಳ ಮುಂದೆ ಸುಧಾರಣೆಗಳಿಗೆ ಏನೂ ಬೆಲೆಯಿಲ್ಲ. ಈ ಕಾಯಿದೆಯನ್ನು ತೀವ್ರವಾಗಿ ಖಂಡಿಸದಿದ್ದರೆ ರಾಷ್ಟ್ರದ ನೈತಿಕ ಅಧಃಪತನವೆಂದು ನನ್ನ ಸ್ಪಷ್ಟ ಮತವಿದೆ. ಸುಧಾರಣೆಗಳು ಬರುವವು ಎಂಬ ಭರವಸೆಯಿಂದ ಸ್ವಾಭಿಮಾನಿಗಳಾದ ಯಾರೂ ರಾಷ್ಟ್ರೀಯ ಭಾವನೆಯನ್ನು ನಾಶಮಾಡಲು ಎಂದೂ ಸಿದ್ಧರಾಗರು. ಗಡಿನಾಡಿನ ವಿಷಯವಾಗಿ ತಾವು ತಂತಿಯಿಂದ ತಿಳಿಸಿದ್ದನ್ನು ನೋಡಿದರೆ, ಲೋಕಪ್ರಿಯ ಮುಖಂಡರ ಬಂಧನ, ಅಸಾಧಾರಣ ಕಾಯಿದೆಗಳನ್ನು ಹಚ್ಚುವದು, ಜೀವಿತ ಹಾಗು ಆಸ್ತಿಗಳ ವಿಷಯದಲ್ಲಿ ಅಸುರಕ್ಷಿತತೆಯನ್ನುಂಟು ಮಾಡುವದು, ತಮ್ಮ ಮುಖಂಡರನ್ನು ಬಂಧಿಸಿದ್ದಕ್ಕಾಗಿ ಮೆರವಣಿಗೆಗಳನ್ನು ಮಾಡುವಾಗ ಅವರ ಮೇಲೆ ಗೋಳೀಬಾರು ಮಾಡುವದು, ಇವೆಲ್ಲ ಅವಶ್ಯವೆಂದು ನನಗನಿಸುವದಿಲ್ಲ. ಖಾನ ಅಬ್ದುಲ ಗಫೂರಖಾನರು ಪೂರ್ಣ ಸ್ವಾತಂತ್ರ್ಯದ ಪುರಸ್ಕಾರವನ್ನು ಮಾಡಿದ್ದರೆ ಅದು ನಮ್ಮ ಜನ್ಮಸಿದ್ಧ ಅಧಿಕಾರವಿರುವದು. ೧೯೨೯ರಲ್ಲಿಯೇ ಕಾಂಗ್ರೆಸ್ಸು ಅದನ್ನು ಘೋಷಿಸಿದೆ. ಕಾಂಗ್ರೆಸ್ಸಿನ ಆಜ್ಞಾಪತ್ರದಲ್ಲಿ ಈ ಘೋಷಣೆಯಿದ್ದೂ ನನ್ನನ್ನು ದುಂಡುಮೇಜಿನ ಪರಿಷತ್ತಿಗೆ ಆಮಂತ್ರಿಸಲಾಗಿದೆ. ದರಬಾರಕ್ಕೆ ಬರುವದನ್ನು ನಿರಾಕರಿಸಿದರೆ ಅವರನ್ನು ಬಂಧಿಸಿ ಸೆರೆಗಟ್ಟಬೇಕೆ? ಖಾನಸಾಹೇಬರು ಜಾತಿದ್ವೇಷವನ್ನು ಹಬ್ಬಿಸುತ್ತಿದ್ದರೆ ನಿಜವಾಗಿಯೂ ವಿಷಾದದ ಸಂಗತಿಯು. ಆದರೆ, ಅವರ ಘೋಷಣೆಗಳ ಉದ್ಗಾರಗಳನ್ನು ನೋಡಲು ನನಗೆ ದೊರೆತಿದೆ. ಅವು ಇದರ ವಿರುದ್ಧವಾಗಿವೆ. ಒಂದು ವೇಳೆ ಅವರು ಜಾತಿದ್ವೇಷವನ್ನು ಹಬ್ಬಿಸುತ್ತಿದ್ದರೆಂದೇ ತಿಳಿಯೋಣ. ಅವರನ್ನು ನ್ಯಾಯಾಸನದ ಮುಂದೆ ಎಳೆಯಲು ಆತಂಕವೇನಿತ್ತು ? ಅಂದರೆ ಅವರಿಗೆ ತಮ್ಮ ಮೇಲಿನ ಆರೋಪವನ್ನು ನಿರಸನಗೊಳಿಸಲು ಅನುವು ದೊರೆಯುತ್ತಿತ್ತು. ಸಂಯುಕ್ತ ಪ್ರಾಂತದ ವಿಷಯದಲ್ಲಿಯಂತೂ ವೈಸರಾಯರಿಗೆ ಪೂರ್ಣ ಸುಳ್ಳು ಸಂಗತಿಗಳು ಸಿಕ್ಕಿವೆ. ಕಾಂಗ್ರೆಸ್ಸು ಕರಬಂದಿ ಚಳುವಳಿಯನ್ನೇ ಕೈಕೊಂಡಿಲ್ಲ. ಒಪ್ಪಂದದ ಸಮಯದಲ್ಲಿ ಕರ

ಕೊಡುವ ವೇಳೆ ಬಂದಿತ್ತು. ಒಪ್ಪಂದದ ಮಾತುಗಳು ಮುಗಿಯುವ ವರೆಗೆ ಕರಕೊಡುವದನ್ನು ತಡೆದುಹಿಡಿಯಲು ಕಾಂಗ್ರೆಸ್ಸಿಗರಿಗೆ ಸಲಹೆಕೊಡಲ್ಪಟ್ಟಿತ್ತು. ಒಂದು ವೇಳೆ ಸರಕಾರದ ಅಧಿಕಾರಿಗಳೇ ಮಾತು ಮುಗಿಯುವ ವರೆಗೆ ತಡೆ ಹಿಡಿಯಲು ಸಿದ್ಧರಾದರೆ, ತಮ್ಮ ಸಲಹೆಯನ್ನು ತಿರುಗಿ ತೆಗೆದುಕೊಳ್ಳುವೆ ವೆಂದು ಶ್ರೀ ಶರವಾಣಿಯವರೇ ಸರಕಾರಕ್ಕೆ ತಿಳಿಸಿದ್ದರು. ಕೂಡಲೆ ಈ ಪ್ರಶ್ನೆ ಬಗೆಹರಿಸುವ ಕಾರಣವಿರಲಿಲ್ಲ. ಈ ಬಗ್ಗೆ ಅನೇಕ ದಿನಗಳಿಂದ ಚರ್ಚೆ ನಡೆದಿದೆ. ಆರ್ಥಿಕ ದೃಷ್ಟಿಯಿಂದ ಅತ್ಯಂತ ಹಣ್ಣಾದ ಲಕ್ಷಾವಧಿ ರೈತರ ಪ್ರಶ್ನೆಯು ಇದರಲ್ಲಿ ಅಡಕವಾಗಿದೆ. ಬಹುಜನರ ಹಿತವನ್ನೇ ಬಯಸುವ ಸರಕಾರವು ಕಾಂಗ್ರೆಸ್ಸಿನಂಥ ಸಂಸ್ಥೆಯು ತಾನಾಗಿಯೇ ಸಹಕಾರ ನೀಡಲು ಬಂದಾಗ ಅದನ್ನು ಸ್ವಾಗತಿಸುತ್ತಿತ್ತು. ಬಹುಜನ ಸಮಾಜದ ಮೇಲೆ ಕಾಂಗ್ರೆಸ್ಸಿನ ಹಿಡಿತವಿದೆ, ಇದು ಸತ್ಯ. ಅಸಹನೀಯ ಆರ್ಥಿಕ ಜುಲುಮೆ ಒದಗಿದಾಗ ಅದರ ನಿವಾರಣೆಗಾಗಿ ಎಲ್ಲ ಉಪಾಯಗಳನ್ನು ಕೈಕೊಂಡು ನಿಷ್ಫಲವಾದ ನಂತರ ಕರಬಂದಿಯನ್ನು ಮಾಡುವ ಹಕ್ಕು ಪ್ರಾಚೀನ ಕಾಲು ದಿಂದಲೂ ಜನತೆಗೆ ಇದೆ. ಯಾವ ಬಗೆಯ ಅರಾಜಕತೆಯೂ ಉಂಟಾಗ ಬೇಕೆಂದು ಕಾಂಗ್ರೆಸ್ಸು ಬಯಸುವದಿಲ್ಲ. ಕಾಂಗ್ರೆಸ್ಸಿನ ಮೇಲೆ ಈ ಬಗೆಯ ಆರೋಪವನ್ನು ಅಪ್ರತ್ಯಕ್ಷವಾಗಿ ಕೂಡ ಯಾರಾದರೂ ಮಾಡುತ್ತಿದ್ದರೆ ಸಹ ಅದನ್ನು ಕಾಂಗ್ರೆಸ್ಸು ನಿರಾಕರಿಸುತ್ತಿದೆ.

ಬಂಗಾಲದ ವಿಷಯದಲ್ಲಂತೂ ಸರಕಾರದ ಹಾಗು ಕಾಂಗ್ರೆಸ್ಸಿನ ಭೂಮಿಕೆಯು ಒಂದೇ ಇದೆ. ಕೊಲೆಯನ್ನು ಕಾಂಗ್ರೆಸ್ಸು ತೀವ್ರವಾಗಿ ನಿಷೇಧಿಸುತ್ತಿದ್ದು, ಅದರ ನಿವಾರಣೋಪಾಯದ ಕೆಲಸದಲ್ಲಿ ಕಾಂಗ್ರೆಸ್ಸು ಸರಕಾರಕ್ಕೆ ಸಹಾಯ ಮಾಡಲು ಯಾವಾಗಲೂ ಸಿದ್ಧವಿದೆ. ಕಾಂಗ್ರೆಸ್ಸು ಬೆದರಿಕೆಯ ವಾದವನ್ನು ನಿಷೇಧಿಸುತ್ತದೆ. ಆದುದರಿಂದಲೇ ದಬ್ಬಾಳಿಕೆಯ ಕಾಯಿದೆಗಳಿಂದ ಜನರನ್ನು ಬೆದರಿಸುವ ಕಾರ್ಯದಲ್ಲಿ ಕಾಂಗ್ರೆಸ್ಸು ಎಂದೂ ಸಹಕಾರವನ್ನು ನೀಡಲಾರದು. ಆದರೆ ಅಹಿಂಸೆಯ ಮರ್ಯಾದೆಯಲ್ಲಿದ್ದು ಸರಕಾರದ ಇಂತಹ ಕೃತ್ಯಗಳ ಮತ್ತು ಕಾಯದೆಬದ್ಧವಾದ ಉಪಾಯಗಳ ಪ್ರತಿರೋಧವನ್ನು ಕಾಂಗ್ರೆಸ್ಸು ಮಾಡಬೇಕು. ಇಬ್ಬರೂ ಸಹ ಇದಕ್ಕೆ ಸಿದ್ಧರಿರಬೇಕೆಂಬ ತಮ್ಮ ತತ್ವವು ನನಗೆ ಮಾನ್ಯವಿದೆ. ಆದರೆ, ತಾವು

ಕಾಂಗ್ರೆಸ್ಸಿನೊಡನೆ ಸಹಕಾರ ಮಾಡದೆ ಕಾಂಗ್ರೆಸ್ಸಿನ ಸಹಕಾರವನ್ನು ಮಾತ್ರ ಬಯಸುತ್ತಿರುವಿರೆಂದು ನಿಮ್ಮ ತಂತಿಯಿಂದ ನನಗೆ ಭಾಸವಾಗಿದೆ. ಪ್ರತಿಯೊಂದು ಮಾತಿಗೂ ಎರಡು ಬದಿಗಳಿಗಿರುತ್ತವೆ. ನನ್ನ ಪಕ್ಷವನ್ನು ಮಂಡಿಸಿ ಈ ವಿಷಯದಲ್ಲಿ ತಮ್ಮ ಅಭಿಪ್ರಾಯವೇನು ಎಂಬುದನ್ನು ತಿಳಿದುಕೊಂಡು ಆ ಮೇಲೆ ನಾನು ಕೊನೆಯ ನಿರ್ಣಯ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ. ಮಿತ್ರತ್ವದಿಂದ ನಾನು ಭೆಟ್ಟಿಯನ್ನು ಕೇಳಿದೆ. ವೈಸರಾಯರು ಅದಕ್ಕೆ ಕೊಟ್ಟ ಉತ್ತರವು ಯೋಗ್ಯವಿಲ್ಲ. ಅವರು ಪುನಃ ವಿಚಾರ ಮಾಡಲಿ, ಮಿತ್ರನೆಂದು ನನಗೆ ಭೆಟ್ಟಿಯನ್ನು ಕೊಡಲಿ. ಚರ್ಚೆಯ ಬಗ್ಗೆ ಇಂತಹದನ್ನು ಒಪ್ಪಿದರೆ ಮಾತಾಡುವೆವು ಎಂಬ ಹಟವು ಯೋಗ್ಯವಾದುದಲ್ಲ. ಹಾಗೆ ಕರಾರು ಹಾಕಬೇಡಿರೆಂದು ವೈಸರಾಯರಿಗೆ ನನ್ನ ಬಿನ್ನಹವಿದೆ. ವೈಸರಾಯರು ನನ್ನೆದುರಿಗೆ ಮಂಡಿಸುವ ಸಂಗತಿಗಳ ಬಗ್ಗೆ ಬಿಚ್ಚುಮನಸ್ಸಿನಿಂದ ವಿಚಾರಿಸುವೆನೆಂದು ನಾನು ಆಶ್ವಾಸನವೀಯುತ್ತೇನೆ. ಆರ್ಡಿನನ್ಸುಗಳನ್ನು ಹಚ್ಚಿದ ಪ್ರಾಂತಗಳಲ್ಲಿ ನಾನು ಸಂಚರಿಸಿ, ಅಲ್ಲಿಯ ಅಧಿಕಾರಿಗಳ ಸಹಾಯದಿಂದ ಎಲ್ಲ ಸಂಗತಿಗಳನ್ನು ವಿಚಾರ ಮಾಡುವೆ. ವಿಚಾರಾಂತ್ಯದಲ್ಲಿ ಜನರ ಕಡೆಗೇ ತಪ್ಪು ಇದೆ ಎಂದು ಕಂಡುಬಂದಲ್ಲಿ ನಾವು ಮೋಸ ಹೋದೆವೆಂದೂ ಸರಕಾರವು ಹೇಳುವದು ಸರಿ ಇದೆಯೆಂದೂ ಹೇಳಲು ನಾನು ಹಿಂದುಮುಂದೆ ನೋಡುವದಿಲ್ಲ. ಮತ್ತು ಕಾಂಗ್ರೆಸ್ಸಿಗೂ ಹೀಗೆ ಸಲಹೆ ಈಯುವೆನು. ಸರಕಾರದೊಡನೆ ಸಹಕರಿಸುವದಕ್ಕೂ ನನಗೊಂದು ಮರ್ಯಾದೆ ಇದೆ ಎಂಬುದನ್ನು ನಾನು ಸ್ಪಷ್ಟವಾಗಿ ತಿಳಿಸಲೇ ಬೇಕು. ಅಹಿಂಸೆಯು ನನ್ನ ಧರ್ಮವಿದೆ. ಸರಕಾರಿ ರಾಜ್ಯಭಾರದಲ್ಲಿ ಪರಿಣಾಮಕಾರಿಯಾದ ಮತಪ್ರದರ್ಶನ ಮಾಡಲು ಬರದಂತಹ ಸಮಯದಲ್ಲಿ ನಮ್ಮ ಹಕ್ಕುಗಳಿಗಾಗಿ ಹೋರಾಡಲು ಕಾಯಿದೆ ಭಂಗವೊಂದೇ ಉಪಾಯವಿದೆ. ಸಶಸ್ತ್ರ ಬಂಡು ಅಥವಾ ರಕ್ತಪಾತಗಳ ಬದಲು ಕಾಯಿದೆಭಂಗವೊಂದೇ ಪರಿಣಾಮಕಾರಕ ಉಪಾಯವೆಂದು ನನ್ನ ಮತ. ಆದುದರಿಂದ ಎಂದೂ ನಾನು ನನ್ನ ಧರ್ಮವನ್ನು ಬಿಡುವದಿಲ್ಲ. ಎಲ್ಲ ಮಾರ್ಗಗಳು ಕಟ್ಟಾದ ಮೂಲಕ ನಿರುಪಾಯವಾಗಿ ನನ್ನ ಸಲಹೆಯ ಮೇರೆಗೆ ಕಾಂಗ್ರೆಸ್ಸು ಕಾಯಿದೆಭಂಗವನ್ನು ಒಪ್ಪಿಕೊಂಡಿದೆ. ವರ್ಕಿಂಗ ಕಮಿಟಿಯು ಕೈಕೊಂಡ ತಾತ್ಪೂರ್ತಿಕ ಗೊತ್ತುವಳಿಯನ್ನು ತಮ್ಮ ಕಡೆಗೆ

ಕಳಿಸುತ್ತಲಿದ್ದೇನೆ. ನನ್ನ ಭೆಟ್ಟಿಯನ್ನು ತೆಗೆದುಕೊಳ್ಳುವದು ಯೋಗ್ಯವೆಂದು ವೈಸರಾಯರಿಗೆ ಅನಿಸಿದರೆ, ನಮ್ಮ ಚರ್ಚೆಯು ಮುಗಿಯುವ ವರೆಗೆ ಕಾಯಿದೆ ಭಂಗವನ್ನು ತಡೆಹಿಡಿಯಲು ಕಾಂಗ್ರೆಸ್ಸಿಗೆ ಸಲಹೆಯನ್ನು ಈಯುವೆ. ಈ ಗೊತ್ತುವಳಿಯನ್ನು ವಿಚಾರಮಾಡುವ ಪ್ರಸಂಗವೇ ಬರಲಿಕ್ಕಿಲ್ಲ. ನಮ್ಮಿಬ್ಬರಲ್ಲಿಯ ಈ ಪತ್ರವ್ಯವಹಾರವು ಅತ್ಯಂತ ಮಹತ್ವದ್ದಿದ್ದು, ಅದನ್ನು ಪ್ರಕಟನೆಗೆ ಕೊಡದೆ ಇರುವದು ಯೋಗ್ಯವಾಗಲಾರದು. ಆದುದರಿಂದ ನಮ್ಮ ಈ ಪತ್ರವ್ಯವಹಾರವನ್ನು ಪ್ರಕಟನೆಗಾಗಿ ಕೊಡುತ್ತಲಿದ್ದೇನೆ.

ತಮ್ಮ

ಮೋ. ಕ. ಗಾಂಧಿ

---

**ಸರಕಾರದ ಉತ್ತರ**

೨ ಜನವರಿ, ೧೯೩೨

ಕೆಲ ವಿಶಿಷ್ಟ ಕರಾರುಗಳನ್ನು ಒಪ್ಪದಿದ್ದಲ್ಲಿ ಪುನಃ ಕಾಯದೆಭಂಗವನ್ನು ಕೈಕೊಳ್ಳುವ ನಿರ್ಣಯವನ್ನು ನಿಮ್ಮ ಸಲಹೆಯಂತೆ ಕಾಂಗ್ರೆಸ್ಸು ಕೈಕೊಂಡದ್ದು ಕಂಡು ಅತ್ಯಂತ ವಿಷಾದವಾಗುತ್ತದೆ.

ಬಾದಶಾಹಿ ಸರಕಾರವು ತಮ್ಮ ಉದ್ದೇಶವನ್ನು ಸಾರಿದಾಗ, ಮುಖ್ಯ ಮಂತ್ರಿಗಳ ಘೋಷಣೆಯಂತೆ ಸುಧಾರಣೆಗಳನ್ನು ಅನ್ವಯಿಸಲು ಭಾರತ ಸರಕಾರವು ನಿಶ್ಚಯಿಸಿದಾಗ, ತಾವು ಈ ಬಗೆಯ ಧೋರಣ ಸ್ವೀಕರಿಸಿದ್ದನ್ನು ಕಂಡು ಮತ್ತಿಷ್ಟು ವಿಷಾದವಾಗುತ್ತದೆ.

ಯಾವುದೊಂದು ರಾಜಕೀಯ ಸಂಸ್ಥೆಯು ಕಾಯಿದೆಭಂಗದ ಬೆದರಿಕೆ ಹಾಕುತ್ತಿದೆಯೆಂದು ಯಾವದೇ ಸರಕಾರವು ತನ್ನ ಹೊಣೆಗಾರಿಕೆಯನ್ನು ಮರೆತು ನಡೆಯಲಾರದು. ಸದ್ಯದ ಪರಿಸ್ಥಿತಿಯಲ್ಲಿ ಉಳಿದ ಎಲ್ಲ ಉಪಾಯ ಗಳನ್ನು ಯೋಚಿಸಿದ ನಂತರ ನಿರುಪಾಯವಾಗಿ, ಪೂರ್ಣ ವಿಚಾರಮಾಡಿ ಕೊನೆಗೆ ಈಗಿನ ಉಪಾಯಗಳನ್ನು ಕೈಕೊಳ್ಳಲಾಗಿದೆ. ಈ ವಿಷಯದಲ್ಲಿ ತಮ್ಮ ನಿರ್ಣಯವನ್ನು ಸ್ವೀಕರಿಸುವ, ಅವನ್ನೇ ಅವಲಂಬಿಸುವ ಸಂಗತಿಯು ಎಂದೂ ಭಾರತ ಸರಕಾರಕ್ಕೆ ಮಾನ್ಯವಾಗುವದು ಶಕ್ಯವಿಲ್ಲ.

ತಾವು ಕಾಯಿದೆಭಂಗದ ಬೆದರಿಕೆಯನ್ನು ಹಾಕಿದ ನಂತರ ಭೆಟ್ಟಿಯ ಉಪಯೋಗವಾಗುವದೆಂದು ನಿಮಗೂ ವರ್ಕಿಂಗ ಕಮಿಟಿಗೂ ಅನಿಸುವದೆಂಬ ಕಲ್ಪನೆಯಲ್ಲಿಯೇ ವೈಸರಾಯರಿಗೆ ವಿಶ್ವಾಸವಿಲ್ಲ.

ಕಾಂಗ್ರೆಸ್ಸು ಸಾರಿದ ಚಳುವಳಿಯ ಬಗ್ಗೆ ನಿಮ್ಮನ್ನೂ ಕಾಂಗ್ರೆಸ್ಸನ್ನೂ ಹೊಣೆಗಾರರೆಂದು ಎಣಿಸಲಾದೀತು. ಸರಕಾರವು ಪರಿಸ್ಥಿತಿಯನ್ನು ನಿಯಂತ್ರಿಸಲು ಸರ್ವ ಉಪಾಯಗಳನ್ನು ಯೋಚಿಸುವದು.

---

## ಗಾಂಧೀಜಿಯವರ ಉತ್ತರ

೩ನೇ ಜನೆವರಿ, ೧೯೩೨

ನಿಮ್ಮ ೨ನೇ ತಾರೀಖಿನ ಉತ್ತರವು ಮುಟ್ಟಿತು. ಆಭಾರಿಯಿದ್ದೇನೆ. ಆದರೆ ಸರಕಾರ ಹಾಗು ವೈಸರಾಯರು ತೆಗೆದುಕೊಂಡ ನಿರ್ಣಯಕ್ಕಾಗಿ ವಿಷಾದವಾಗುತ್ತದೆ. ಪ್ರಾಮಾಣಿಕವಾದ ಮತಪ್ರದರ್ಶನವು ಬೆದರಿಕೆಯೆಂದು ತಿಳಿಯುವದು ತಪ್ಪಾದೀತು. ಕಾಯಿದೆಭಂಗವು ಸುರುವಿದ್ದಾಗಲೇ ದಿಲ್ಲಿಯಲ್ಲಿ ಒಪ್ಪಂದದ ಮಾತುಕತೆಗಳು ನಡೆದು ಮುಗಿದವು. ಇದನ್ನು ನಿಮ್ಮ ನೆನಪಿಗೆ ತಂದುಕೊಡುವೆ. ದಿಲ್ಲಿ ಕರಾರು ಆದ ಸಮಯದಲ್ಲಿ ಕಾಯದೆಭಂಗವು ಪೂರ್ಣ ನಿಲ್ಲಿಸಲ್ಪಡದೆ ಅದು ತಡೆಹಿಡಿಯಲ್ಪಟ್ಟಿದೆ ಎಂದು ಸರಕಾರಕ್ಕೆ ನಾನು ಸ್ಪಷ್ಟ ವಾಗಿ ತಿಳಿಸಿದ್ದೇನೆ. ಲಂಡನ್ನಿಗೆ ಹೋಗುವ ಮೊದಲು ಈ ಮಾತನ್ನು ಸಪ್ಟಂಬರದಲ್ಲಿ ಮತ್ತೆ ಸ್ಪಷ್ಟಮಾಡಿದ್ದೇನೆ. ಕಾಂಗ್ರೆಸ್ಸಿಗೆ ವಿಶಿಷ್ಟ ಪರಿಸ್ಥಿತಿ ಯಲ್ಲಿ ಕಾಯಿದೆಭಂಗವನ್ನು ಅವಲಂಬಿಸಲೇಬೇಕಾದೀತೆಂದು ಸರಕಾರಕ್ಕೆ ಎಚ್ಚರಿಸಿದ್ದೆ. ಹೀಗಿದ್ದು ಚರ್ಚಿಸುವದನ್ನು ಅವರು ತಪ್ಪಿಸಲಿಲ್ಲ. ಕಾಯಿದೆ ಭಂಗವನ್ನು ಮಾಡಿದರೆ ಶಿಕ್ಷೆಯಾಗುವದೆಂದು ಹೇಳುವದೆಂದರೆ ಕಾಯಿದೆ ಭಂಗದ ಫಲವನ್ನು ಸಾರಿದಂತೆ. ಆದರೆ ಯುಕ್ತಿವಾದದಿಂದ ಯಾವ ಪರಿಣಾಮವೂ ಆಗುವದಿಲ್ಲ. ನನ್ನ ಧೋರಣವು ಸರಕಾರಕ್ಕೆ ಮಾನ್ಯವಿರ ದಿದ್ದರೆ, ನನ್ನನ್ನು ಲಂಡನಕ್ಕೆ ಕಳಿಸುತ್ತಲೇ ಇದ್ದಿಲ್ಲ. ಆದರೆ ಅದರ ಬದಲು ವೈಸರಾಯರು ನನ್ನನ್ನು ಆಶೀರ್ವದಿಸಿದರು. ಸರಕಾರದ ಯಾವದೇ

ನಿರ್ಣಯವು ನನ್ನನ್ನು ಅವಲಂಬಿಸಿರಬೇಕೆಂಬ ನನ್ನ ಹಕ್ಕನ್ನು ನಾನು ಹೇಳುವೆನೆಂದು ಹೇಳುವುದು ಯೋಗ್ಯವೂ ನ್ಯಾಯವಾದುದೂ ಆಗಲಾರದು. ಆದರೆ ಯಾವುದೇ ಪ್ರಾತಿನಿಧಿಕ ಹಾಗು ಕಾಯದೆಬದ್ಧ ಸರಕಾರವು ಸಾರ್ವಜನಿಕ ಸಂಸ್ಥೆಯಿಂದ ಅಥವಾ ಅದರ ಪ್ರತಿನಿಧಿಯಿಂದ ಬಂದ ಸೂಚನೆಗಳನ್ನು ವಿಚಾರ ಮಾಡುವದು, ಮತ್ತು ಯಾವ ಕಾಯದೆಯು ಜನರಿಗೆ ಮನಸ್ಸಿಗೆ ಬರುವದಿಲ್ಲವೋ ಅಂತಹ ವಿಷಯಕ್ಕೆ ಪೂರ್ಣ ಮಾಹಿತಿಕೊಡುವದೆಂದು ನನಗೆ ಅನಿಸುತ್ತದೆ. ನಾನು ಕೊನೆಯಲ್ಲಿ ಹೇಳಿದ ಅರ್ಥವೇ ನನ್ನದಿದೆ. ಯಾರ ಪಕ್ಷವು ಸರಿಯಾಗಿದೆ ಎಂಬುದನ್ನು ಕಾಲವು ನಿರ್ಣಯಿಸುವದು. ಕಾಂಗ್ರೆಸ್ಸು ನಿರ್ಮತ್ಸರ ಬುದ್ಧಿಯಿಂದಲೂ ಅಹಿಂಸೆಯಿಂದಲೂ ಈ ಚಳುವಳಿಯನ್ನು ನಡೆಸುತ್ತಿದೆ ಎಂದು ಇಷ್ಟೇ ನಾನು ಹೇಳಬಲ್ಲೆ. ಈ ಬಗ್ಗೆ ನಾನು ಸರಕಾರಕ್ಕೆ ಆಶ್ವಾಸನಕೊಡುತ್ತೇನೆ. ನಾವು ಹೂಡುವ ಚಳುವಳಿ ಬಗ್ಗೆ ನಾವು ಹೊಣೆಗಾರರು ಎಂಬ ಮಾತು ಹೇಳುವ ಆವಶ್ಯಕತೆ ಇಲ್ಲ.

ತಮ್ಮ

ಮೋ. ಕ. ಗಾಂಧಿ

# ಪ್ರಾಯೋಪವೇಶ

೧ ಯರವಡಾ ಪ್ರಾಯೋಪವೇಶ
೨ ಸ್ಯಾಮುಎಲ್ ಹೋರರ ಉತ್ತರ
೩ ರ್‍ಯಾಮ್ಸೆ ಮೆಕ್ಡೊನಾಲ್ಡಗೆ
೪ ಮೆಕ್ಡೊನಾಲ್ಡರ ಉತ್ತರ
೫ ಗಾಂಧೀಜಿಯ ಕೊನೆಯ ಉತ್ತರ
೬ ಮುಂಬಯಿ ಸರಕಾರಕ್ಕೆ

# ಯರವಡಾ ಪ್ರಾಯೋಪವೇಶ

ಪ್ರಿಯ ಸರ್ ಸಾಮ್ಯುಯೆಲ್,

ಚಕ್ರಗೋಷ್ಠಿಯಲ್ಲಿ ಅಲ್ಪಸಂಖ್ಯಾಕರ ಹಕ್ಕುಗಳ ಪ್ರಸ್ತಾಪ ಬಂದಾಗ ನನ್ನ ಭಾಷಣದ ಕೊನೆಯಲ್ಲಿ, ನಮ್ಮ ದಲಿತವರ್ಗಕ್ಕೆ ಪ್ರತ್ಯೇಕ ಚುನಾವಣೆಯನ್ನು ಕೊಟ್ಟರೆ ನಾನದನ್ನು ಪ್ರಾಣಪಣವಿಟ್ಟು ವಿರೋಧಿಸಬೇಕಾದೀತು ಎಂದು ಹೇಳಿದ್ದೆ; ಅದು ನಿಮಗೆ ನೆನಪಿದ್ದೀತು. ಆ ಗಳಿಗೆಯ ಉದ್ರೇಕಭರದಲ್ಲಿ ಹೇಳಿದ್ದಲ್ಲ ಅದು. ಅಲಂಕಾರಕ್ಕಾಗಿ ಹೇಳಿದ್ದೂ ಅಲ್ಲ. ಅದು ಧರ್ಮ ಪ್ರಸಕ್ತಿ.

ಆ ಮಾತಿನಂತೆ, ಹಿಂದುಸ್ಥಾನಕ್ಕೆ ಬಂದ ಮೇಲೆ ದಲಿತವರ್ಗಕ್ಕೆ ಪ್ರತ್ಯೇಕ ಚುನಾವಣೆಗೆ ವಿರುದ್ಧವಾಗಿ ಮಹಾಜನಾಭಿಪ್ರಾಯನ್ನು ಸಂಗ್ರಹಿಸಲು ಬಯಸಿದ್ದೆ. ಆದರೆ ಅದು ಸಾಧ್ಯವಾಗಲಿಲ್ಲ.

ನನಗೆ ಓದಲು ಅವಕಾಶ ಕೊಟ್ಟಿರುವ ಪತ್ರಿಕೆಗಳಿಂದ ಸಾರ್ವಭೌಮ ಸರಕಾರ ಯಾವ ಗಳಿಗೆಯಲ್ಲೂ ಈ ನಿರ್ಧಾರಮಾಡಿ ಬಿಟ್ಟಾರು ಅನಿಸುತ್ತದೆ. ದಲಿತವರ್ಗಕ್ಕೆ ಪ್ರತ್ಯೇಕ ಚುನಾವಣೆಯನ್ನು ಏರ್ಪಡಿಸಿದರೆ ನಿಮ್ಮ ತೀರ್ಮಾನ, ಆಗ ನನ್ನ ಪ್ರತಿಜ್ಞೆಗೆ ತಕ್ಕಂತೆ ಆಗತ್ಯವಾದ ಕಾರ್ಯಕ್ರಮವನ್ನು ಕೈಗೊಳ್ಳ ಬೇಕೆಂದಿದ್ದೆ ಮೊದಲು. ಹಾಗೆ ಮಾಡಿದರೆ ಸರಕಾರಕ್ಕೆ ಮುನ್ನಸೂಚನೆ ಯನ್ನೇ ಕೊಡದೆ ಅನ್ಯಾಯವಾಗಿ ನಡೆದಂತಾದೀತು ಎನಿಸಿತು. ನಾನು ಹೇಳುವ ಈ ಮಾತಿಗೆ ನಾ ಕೊಟ್ಟಷ್ಟು ಬೆಲೆ ಅವರು ಕೊಡಲಾರರು; ಸಹಜವೇ.

ದಲಿತವರ್ಗಕ್ಕೆ ಪ್ರತ್ಯೇಕ ಚುನಾವಣೆಯನ್ನು ಏರ್ಪಡಿಸುವದರ ಬಗ್ಗೆ ನನಗಿರುವ ಆಕ್ಷೇಪಣೆಗಳನ್ನೆಲ್ಲ ಮತ್ತೆ ಇಲ್ಲಿ ಹೇಳಬೇಕಾಗಿಲ್ಲ. ನಾನೂ ಅವರ ಲ್ಲೊಬ್ಬನೆಂದೇ ನನ್ನ ಭಾವನೆ. ಅವರ ವಿಷಯವೇ ಬೇರೆ. ಉಳಿದವರ ವಿಷಯವೇ ಬೇರೆ. ಅವರಿಗೆ ಶಾಸನ ಸಭೆಗಳಲ್ಲಿ ಪ್ರಾತಿನಿಧ್ಯವಿರಬಾರದೆಂಬವನಲ್ಲ

ನಾನು. ಉಳಿದವರಿಗೆ ಮತಾಧಿಕಾರ ಕೊಡುವಾಗ ಏನೇ ನಿಯಮಗಳನ್ನು ಹಾಕಿ, ದಲಿತವರ್ಗಕ್ಕೆ ಪ್ರಾಪ್ತವಯಸ್ಕರಾದ ಗಂಡಸರು ಹೆಂಗಸರು ಎಲ್ಲರಿಗೂ, ವಿದ್ಯೆಯಿರಲಿ ಇಲ್ಲದಿರಲಿ ಸೊತ್ತು ಇರಲಿ ಇಲ್ಲದಿರಲಿ, ಮತಾಧಿಕಾರ ಕೊಡಿ ಎನ್ನುತ್ತೇನೆ. ಆದರೆ ಪ್ರತ್ಯೇಕ ಚುನಾವಣೆಯಿಂದ ಅವರಿಗೂ ಹಿಂದೂಗಳಿಗೂ ಉಭಯತಾಪಿ ನಷ್ಟ. ಬರೀ ರಾಜಕೀಯದ ದೃಷ್ಟಿ ಅಂತಿರಲಿ, ಪ್ರತ್ಯೇಕ ಚುನಾವಣೆಯಿಂದ ಅವರಿಗೆ ಎಷ್ಟು ಹಾನಿಯಾದೀತೆಂಬುದನ್ನು ಅರಿತು ಕೊಳ್ಳಲು, ಅವರು ಸವರ್ಣ ಹಿಂದುಗಳ ಮಧ್ಯ ಹೇಗೆ ವಾಸವಾಗಿದ್ದಾರೆಂಬುದೂ ತಮ್ಮ ಬಾಳುಬದುಕಿಗಾಗಿ ಇವರ ಮೇಲೆ ಎಷ್ಟು ಅವಲಂಬಿಸಿದ್ದಾರೆಂಬುದೂ ಅರ್ಥವಾಗಬೇಕು. ಹಿಂದೂ ಸಮಾಜಕ್ಕಂತೂ ಪ್ರತ್ಯೇಕ ಚುನಾವಣೆ ವಿನಾಶಕಾರಿ. ವಿಭಾಗಕಾರಿ ಈ ವರ್ಗದವರ ವಿಷಯ ನನಗೆ ಮುಖ್ಯವಾಗಿ ಧಾರ್ಮಿಕ ಪ್ರಶ್ನೆ, ನೈತಿಕ ಸಮಸ್ಯೆ. ರಾಜಕೀಯ ಮುಖ ಮುಖ್ಯವಾದ್ದೇ ಆದರೂ ಧಾರ್ಮಿಕ ನೈತಿಕ ಸಮಸ್ಯೆಯ ಮುಂದೆ ಅದು ಕೇವಲ ತೃಣ. ಚಿಕ್ಕಂದಿನಿಂದಲೂ ನನಗೆ ಈ ಜನರ ಯೋಗ ಕ್ಷೇಮದಲ್ಲಿ ಆಸಕ್ತಿ. ಅನೇಕ ಸಲ ಅವರಿಗಾಗಿ ನನ್ನ ಸರ್ವಸ್ವವನ್ನೂ ತ್ಯಾಗಕ್ಕೆ ಒಡ್ಡಿದೇನೆ. ಇದು ನೆನಪಿದ್ದರೆ ನನ್ನ ಈಗಿನ ಭಾವನೆಯನ್ನು ನೀವು ಗ್ರಹಿಸೀರಿ. ನನ್ನ ಜಂಬಕ್ಕಾಗಿ ನಾನಿದನ್ನು ಹೇಳುತ್ತಿಲ್ಲ. ಈ ದಲಿತವರ್ಗವನ್ನು ಮನಸಾರೆ ನೂರಾರು ವರ್ಷಕಾಲ ಹೀನಸ್ಥಿತಿಗೆ ನೂಕಿದ್ದಕ್ಕಾಗಿ ಸವರ್ಣ ಹಿಂದೂಗಳು ಎಷ್ಟು ಪರಿಹಾರ ಮಾಡಿದರೂ ಸಾಲದು ಅನಿಸುತ್ತದೆ. ಆದರೆ ಈ ಪ್ರತ್ಯೇಕ ಚುನಾವಣೆ ಪ್ರಾಯಶ್ಚಿತ್ತವೂ ಅಲ್ಲ, ದಲಿತರ ಮೇಲೆ ಹೇರಿರುವ ಅವಮಾನ ಭಾರಕ್ಕೆ ಪರಿಹಾರವೂ ಅಲ್ಲ.

ಆದ್ದರಿಂದ ಸಾರ್ವಭೌಮ ಸರಕಾರಕ್ಕೆ ವಿನಯದಿಂದ ತಿಳಿಸಬಯುಸುತ್ತೇನೆ. ಅವರು ದಲಿತವರ್ಗಕ್ಕೆ ಪ್ರತ್ಯೇಕ ಚುನಾವಣೆಯನ್ನೇನಾದರೂ ಏರ್ಪಡಿಸಿದರೋ ನಾನು ಆಮರಣಾಂತ ಪ್ರಾಯೋಪವೇಶ ಮಾಡಬೇಕಾದೀತು.

ನಾನೀಗ ಸೆರೆಯಾಳು. ಇಂಥದ್ದನ್ನೇನಾದರೂ ನಾನು ಮಾಡಿದೆನೋ ಸರಕಾರಕ್ಕೆ ಬಹಳ ಕಕ್ಕಾಬಿಕ್ಕಿಯಾದೀತು. ಇದೆಲ್ಲ ಉನ್ಮಾದ ಮಾರ್ಗ, ಇಂಥದನ್ನು ರಾಜಕೀಯದಲ್ಲಿ ನನ್ನಂಥ ಹೊಣೆಗಾರ, ತರುವುದು ಬಹಳ

ತಪ್ಪು ಎಂದು ಅನೇಕರು ಭಾವಿಸಿಯಾರು. ಇದೆಲ್ಲ ದುಃಖಕರ; ನಾ ಬಲ್ಲೆ. ನಾನು ಹೇಳಬಹುದಾದ್ದು ಇಷ್ಟೇ: ಈ ಕಾರ್ಯ ನನ್ನ ಜೀವಾಳಕ್ಕೆ ಸಂಬಂಧಿಸಿದ್ದು, ಬರೀ ವ್ಯವಹಾರ ವಿಧಾನವಲ್ಲ. ನನ್ನ ಅಂತರಾತ್ಮನ ಅಪ್ಪಣೆ ಅದು: ನಾನದನ್ನು ಉಲ್ಲಂಘಿಸಲಾರೆ. ನಾನು ವಿವೇಕಿ ಎಂದು ಈಗಿರುವ ಕೀರ್ತಿಗೆ ಬಾಧಕವಾದರೂ ಚಿಂತೆಯಿಲ್ಲ.

ಒಂದು ವೇಳೆ ನಾನು ಬಂಧವಿಮುಕ್ತನಾದರೂ ನನ್ನೀ ಉಪವಾಸ ವ್ರತದ ಅಗತ್ಯ ಕಡಿಮೆಯಾಗದು; ಅದು ಅಪರಿಹಾರ್ಯವಿಧಿ.

ಆದರೆ ನನ್ನ ಭೀತಿಯೆಲ್ಲ ನಿರಾಧಾರವಾಗಲಿ, ಬ್ರಿಟಿಷ್ ಸರಕಾರಕ್ಕೆ ದಲಿತವರ್ಗಕ್ಕಾಗಿ ಪ್ರತ್ಯೇಕ ಚುನಾವಣೆಯನ್ನು ಏರ್ಪಡಿಸುವ ಬಯಕೆಯೇ ಇಲ್ಲವೆಂದಾಗಲಿ ಎಂದು ಹಾರಯಿಸುತ್ತಿದ್ದೇನೆ.

ನನ್ನ ಮನಸ್ಸನ್ನು ನೋಯಿಸುತ್ತಿರುವುದು ಮತ್ತೊಂದಿದೆ. ಅದೂ ಇಂಥ ಉಪವಾಸಕ್ಕೆ ಕಾರಣವಾಗುವಂಥದೇ. ನಿಮ್ಮ ಪ್ರಜಾಭಂಜನದ ರೀತಿ. ಯಾವಾಗ ನನಗೆ ಆ ಸಿಡಿಲು ಹೊಡೆದೀತೋ ಯಾವಾಗ ಆ ತ್ಯಾಗ ಮಾಡಬೇಕಾದೀತೋ ನಾ ಹೇಳಲಾರೆ. ಈ ಪ್ರಜಾದಮನಕಾರ್ಯ ನ್ಯಾಯದ ಮಿತಿ ದಾಟಿದಂತೆ ಕಾಣುತ್ತಿದೆ. ಸರಕಾರದ ಹಿಂಸಾಕಾರ್ಯ ದೇಶದಲ್ಲೆಲ್ಲ ಹರಡುತ್ತಿದೆ. ಇಂಗ್ಲೀಷು ಅಧಿಕಾರಿಗಳೂ ಭಾರತೀಯ ಅಧಿಕಾರಿಗಳೂ ಇಬ್ಬರೂ ಪಶುಗಳಾಗುತ್ತಿದ್ದಾರೆ. ತಮ್ಮ ಅಣ್ಣ ತಮ್ಮಂದಿರನ್ನು ಅಮಾನುಷವಾಗಿ ಕಂಡರೆ, ಜನಕ್ಕೆ ದ್ರೋಹಮಾಡಿದರೆ ಅದು ಶೌರ್ಯವೆಂದು ಹೇಳಿ ಹೇಳಿ ಸರಕಾರ ಭಾರತೀಯ ಅಧಿಕಾರಿಗಳನ್ನು ಪೂರಾ ನೀತಿ ಕೆಡಿಸಿದೆ. ಜನವಂತೂ ಗತವೀರ್ಯರಾಗಿದ್ದಾರೆ. ವಾಕ್ಸ್ವಾತಂತ್ರ್ಯಲೋಪವಾಗಿದೆ. ನ್ಯಾಯಶಿಷ್ಟಗಳ ಹೆಸರಿನಲ್ಲಿ ಪುಂಡತನ ಮೆರೆಯುತ್ತಿದೆ. ಸಾರ್ವಜನಿಕ ಸೇವೆಗೆ ಬಂದ ಹೆಂಗಸರಿಗೆ ಎಲ್ಲಿ ತಮ್ಮ ಮಾನಹರಣವಾದೀತೋ ಎಂಬ ಭಯ ಹುಟ್ಟಿದೆ.

ಕಾಂಗ್ರೆಸ್ಸು ಹೊತ್ತಿಸಿರುವ ಸ್ವಾತಂತ್ರ್ಯ ಜ್ಯೋತಿಯನ್ನು ನಂದಿಸಲು ಇದನ್ನೆಲ್ಲ ಮಾಡುತ್ತಿದೀರಿ. ಈ ದಮನದಿಂದ ಸಾಮಾನ್ಯ ಶಾಸನಗಳೇ ಅಲ್ಲದೆ ಹೊಸದಾಗಿ ಜನರನ್ನು ಅವಮಾನಿಸಲೆಂದೇ ಮಾಡಿದ ನಿರಂಕುಶ ನಿಯಮಗಳನ್ನು ಮುರಿವ ಪ್ರೇರೇಪಣೆ ಆಗುತ್ತದೆ.

ಇದು ಯಾವುದರಲ್ಲೂ ಪ್ರಜಾಧರ್ಮ ಕಾಣದಿರದು. ಮೊನ್ನೆ ತಾನೆ ಇಂಗ್ಲೆಂಡಿಗೆ ಹೋಗಿದ್ದೆನಲ್ಲ. ಅಲ್ಲಿ ನೋಡಿದ್ದದರಲ್ಲಿ ನಿಮ್ಮ ಪ್ರಜಾಧರ್ಮ ಬರೀ ಬುರುಗು, ಮೇಲ್ಮಿರುಗು. ಅತಿ ಮುಖ್ಯವಾದ ವಿಷಯಗಳನ್ನೆಲ್ಲ ಹಲವು ವ್ಯಕ್ತಿಗಳೇ ತೀರ್ಮಾನಿಸುತ್ತಾರೆ. ಪಾರ್ಲಿಮೆಂಟನ್ನು ಕೇಳುವ ಗೋಜೇ ಇಲ್ಲ. ಆ ಮೇಲೆ ತಾವು ಏನು ಮಾಡುತ್ತೇವೆಂಬುದು ಕೂಡ ತಿಳಿಯದೆ ಪಾರ್ಲಿಮೆಂಟು ಸುಮ್ಮನೆ ಹೆಬ್ಬೆಟ್ಟು ಒತ್ತುತ್ತದೆ. ಈಜಿಪ್ಟಿನ ವಿಷಯ, ೧೯೧೪ ರ ಯುದ್ಧ ಹಾಗೇ ಆಯಿತು. ಹಿಂದುಸ್ಥಾನದ ವಿಷಯವೂ ಅಷ್ಟೇ. ಪ್ರಜಾತಂತ್ರದ ಹೆಸರಿನಲ್ಲಿ ಮೂವತ್ತು ಕೋಟಿ ಜನರ ಅದೃಷ್ಟ ನಿರ್ಣಯವನ್ನು ಮಾಡುವ ಅಧಿಕಾರವನ್ನು ಒಬ್ಬ ವ್ಯಕ್ತಿಗೆ ನಿರಂಕುಶಾಧಿಕಾರ ವನ್ನು ಕೊಡುತ್ತೀರಿ. ಭೀಕರ ವಿನಾಶ ಸಾಧನಗಳನ್ನೆಲ್ಲ ಸಂಗ್ರಹಿಸಿ ಆ ನಿರ್ಣಯವನ್ನು ನಡಸುತ್ತೀರಿ. ಇವನ್ನು ನೋಡಿ ನನ್ನ ಇಡೀ ಜೀವವೆ ಮುಲೆತು ನಿಲ್ಲುತ್ತದೆ. ಇದು ಪ್ರಜಾತಂತ್ರವಲ್ಲ; ಅದರ ಸಮಾಧಿ.

ನಮ್ಮ ಎರಡೂ ಜನಾಂಗದ ಮನಸ್ಸು ಈಗಾಗಲೇ ಕಟುವಾಗಿದೆ. ಈ ತೊತ್ತುಳಿತ ಬಹುಕಾಲ ನಡೆದರೆ ಇನ್ನೂ ಕಟುತರವಾಗದಿರದು. ನನ್ನ ಮಟ್ಟಿಗೆ ನಾನು ಈ ಪ್ರವಾಹವನ್ನು ಹೇಗೆ ತಡೆಗಟ್ಟಲಿ, ಎಂದು ಯೋಚಿ ಸುತ್ತೇನೆ. ಶಾಸನ ಭಂಗವನ್ನು ನಿಲ್ಲಿಸಲೇ ? ಇಲ್ಲ. ಅದು ನನ್ನ ಧರ್ಮ ಸ್ವಭಾವತಃ ನಾನು ಪ್ರಜಾಧರ್ಮವಾದಿ. ಅದರೆ ನನ್ನ ಪ್ರಜಾಧರ್ಮದಲ್ಲಿ ತನ್ನ ನಿರ್ಣಯವನ್ನು ನಡೆಸಲು ಬಲಾತ್ಕಾರವಿಲ್ಲ, ಹಿಂಸೆಯ ಸಾಧನವಿಲ್ಲ. ಅಂತೇ ಶರೀರ ಬಲದ ಉಪಯೋಗ ನ್ಯಾಯ ಎಂಬ ಸಂದರ್ಭದಲ್ಲೆಲ್ಲ ಅದರ ಬದಲು ಶಾಸನ ವಿರೋಧವನ್ನು ಮಾಡಬಹುದು ಎಂದೇ ಅದನ್ನು ರಚಿಸ ಲಾಗಿದೆ. ಅದು ಆತ್ಮಯಜ್ಞದ ಕ್ರಮ. ಆದರಲ್ಲಿ ಒಂದೊಂದು ಸಂದರ್ಭ ದಲ್ಲಿ ಶಾಸನವಿರೋಧಿ ಪ್ರಾಯೋಪವೇಶ ಮಾಡಿ ಸಂಪೂರ್ಣವಾಗಿ ಆತ್ಮತ್ಯಾಗ ಮಾಡಬೇಕಾದೀತು. ನನಗಿನ್ನೂ ಆ ಗಳಿಗೆ ಬಂದಿಲ್ಲ. ಅಂಥ ಹೆಜ್ಜೆ ಇಡಲು ನನಗಿನ್ನೂ ಒಳಗಿಂದ ಅನುಲಂಘನೀಯ ಸಂದೇಶ ಬಂದಿಲ್ಲ. ಆದರೆ ಹೊರಗಡೆ ನಡೆಯುತ್ತಿರುವ ಸಂಗತಿಗಳು ನನ್ನ ಜೀವಾಳವನ್ನೇ ಕಲಕುತ್ತಿವೆ. ಆದ್ದರಿಂದ ದಲಿತವರ್ಗದ ವಿಷಯವಾಗಿ ನಾ ಮಾಡಬಹುದಾದ ಉಪವಾಸದ ಪ್ರಸ್ತಾಪಮಾಡಿದಾಗ, ಅಂಥ ಇನ್ನೊಂದು ಉಪವಾಸದ ಸಂಭವ, ಆಸ್ತಿ

ಕಾಲದಲ್ಲೆ, ಇದೆ ಎಂಬುವನ್ನು ತಿಳಿಸದಿದ್ದರೆ ನಾನು ನಿಮಗೆ ಸತ್ಯವಾಗಿ ನಡೆದು ಕೊಂಡಂತೆ ಆಗಲಾರದು ಅನಿಸೀತು.

ನಿಮ್ಮೊಂದಿಗೆ ಮಾಡಿದ ಪತ್ರವ್ಯವಹಾರವೆಲ್ಲ ರಹಸ್ಯವಾಗಿದೆ. ಈಗ ತಾನೆ ಇಲ್ಲಿಗೆ ಬಂದಿರುವ ಮಹಾದೇವ ದೇಸಾಯಿ, ಸರದಾರ ವಲ್ಲಭಭಾಯಿ ಇಬ್ಬರಿಗೂ ಇದು ಗೊತ್ತಿದೆ. ಈ ಪತ್ರವನ್ನು ನಿಮಗೆ ಬೇಕಾದ ಹಾಗೆ ಉಪ ಯೋಗಿಸಬಹುದು.

ಯರವಡಾ ನಿಮ್ಮ

೧೧—೩—೩೨ ಮೋ. ಕ. ಗಾಂಧಿ

---

**ಹೋರರ ಉತ್ತರ**

ಇಂಡಿಯಾ ಆಫೀಸ, ವ್ಹಾಯಿಟಹಾಲ

೧೩ ನೇ ಎಪ್ರಿಲ, ೧೯೩೨

ಪ್ರಿಯ ಗಾಂಧಿ

ತಮ್ಮ ೧೧ ರ ಓಲೆ ತಲ್ಪಿತು. ಅಸ್ಪೃಶ್ಯರ ಬಗ್ಗೆ ಪ್ರತ್ಯೇಕ ಮತದಾರ ಸಂಘಗಳನ್ನೇರ್ಪಡಿಸುವ ಬಗ್ಗೆ ತಮ್ಮ ಅಂತಃಕರಣದಲ್ಲಿ ಯಾವ ಬಗೆಯ ತೀವ್ರ ಭಾವನೆಗಳಿವೆ ಎಂಬುದನ್ನು ನಾನು ಒಲ್ಲೆ. ಯಾವುದೊಂದು ವಿಷಯವನ್ನು ಪೂರ್ಣವಿಚಾರ ಮಾಡಿಯೇ ಸರಕಾರವು ನಿರ್ಣಯಕ್ಕೆ ಬರುವುದೆಂದು ಮಾತ್ರ ನಾನು ಹೇಳಬಲ್ಲೆ. ಇನ್ನೂ ಲೋದಿಯನ್ ಕಮಿಟಿಯ ವರದಿ ಬಂದಿಲ್ಲ. ಬಂದ ನಂತರ ಅದನ್ನು ಪೂರ್ಣವಿಚಾರ ಮಾಡಲಾಗುವದು. ಆ ಸಮಯಕ್ಕೆ ತಮ್ಮ ಹಾಗು ತಮ್ಮ ಅನುಯಾಯಿಗಳ ವಿಚಾರಗಳನ್ನು ನಾವು ಮಾಡಲೇಬೇಕಾಗುವದು. ನನ್ನ ಸ್ಥಳದಲ್ಲಿ ತಾವಿದ್ದರೆ ತಾವು ಇಷ್ಟೇ ಮಾಡ

ಬೇಕಾಗುತ್ತಿತ್ತಲ್ಲವೇ ! ವರದಿಯು ಹೊರಬೀಳುವ ವರೆಗೆ ನಿಮಗೆ ವಿಚಾರ ಮಾಡಲು ನಿಮ್ಮ ಕೊನೆಯ ನಿರ್ಣಯ ಕೈಕೊಳ್ಳಲು ಸಮಯವಿದೆ. ನಿರ್ಣಯ ಮಾಡುವ ಮೊದಲು ಎರಡೂ ಪಕ್ಷಗಳನ್ನು ಪೂರ್ಣವಿಚಾರ ಮಾಡ ಬೇಕಾದೀತು. ಇದಕ್ಕಿಂತ ಹೆಚ್ಚಿಗೆ ನನಗೇ ಹೇಳಲು ಬರುವಂತಿಲ್ಲ. ತಾವೂ ಅಪೇಕ್ಷಿಸಲಾರಿರಿ.

ದಬ್ಬಾಳಿಕೆಯ ವಿಷಯವಾಗಿ, ಈ ಮೊದಲೇ ನಾನು ನನ್ನ ಅಭಿಪ್ರಾಯ ಗಳನ್ನು ಸಾರಿದ್ದೇನೆ. ಅತ್ಯಾಚಾರದಿಂದ ಜನರನ್ನೂ ಶಾಂತತೆಯನ್ನೂ ರಕ್ಷಿಸುವದಕ್ಕಾಗಿಯೇ ವಿಶೇಷಾಧಿಕಾರಗಳು ಹೊರಬಿದ್ದಿವೆ. ಕಾರಣವು ಇಲ್ಲದಂತಾದೊಡನೆ ಕಾಯದೆಗಳು ತಾವಾಗಿಯೇ ಮಾಯವಾಗುವವು.

ಸ್ಯಾಮುಎಲ್ ಹೋರ



## ರ್‍ಯಾಮ್ಸೆ ಮ್ಯಾಕ್ಡೊನಾಲ್ಡಗೆ

ಪ್ರಿಯ ಮಿತ್ರ,

ಅಸ್ಪೃಶ್ಯ ವರ್ಗದ ವಿಷಯವಾಗಿ ಹೋರರಿಗೆ ಬರೆದ ಪತ್ರವನ್ನು ತಾವೂ ತಮ್ಮ ಮಂತ್ರಿಮಂಡಲವೂ ನೋಡಿರಬಹುದು, ಈ ಪತ್ರವನ್ನೂ ಅದರೊಡನೆಯೇ ಓದಬೇಕು.

ಸರಕಾರದ ಅಲ್ಪಸಂಖ್ಯಾಕರ ಪ್ರತಿನಿಧಿತ್ವದ ವಿಷಯವಾಗಿ ಕೊಟ್ಟ ನಿರ್ಣಯವನ್ನು ಓದಿ, ರಾತ್ರಿಯೆಲ್ಲ ವಿಚಾರ ಮಾಡಿದೆ. ನಾನು ಅಲ್ಪಸಂಖ್ಯಾಕರ ಕಮೀಟಿಯ ಮುಂದೆ ಭಾಷಣ ಮಾಡಿದಂತೆ ಈ ನಿರ್ಣಯದ ವಿರುದ್ಧವಾಗಿ ಪ್ರಾಣಾಂತಿಕ ಹೋರಾಟವನ್ನು ಮಾಡಬೇಕಾಗಿದೆ. ಈ ವಿಷಯದಲ್ಲಿ ಉಪವಾಸದ ಹೊರತು ಬೇರೊಂದು ಮಾರ್ಗವಿಲ್ಲ. ಈ ಉಪವಾಸದಲ್ಲಿ ಯಾವ ಬಗೆಯ ಅನ್ನವನ್ನೂ ಸ್ವೀಕರಿಸುವದಿಲ್ಲ, ನೀರನ್ನು ಮಾತ್ರ ತೆಗೆದುಕೊಳ್ಳುವೆ. ಅದರಲ್ಲಿ ಒಮ್ಮೊಮ್ಮೆ ಉಪ್ಪು ಅಥವಾ ಸೋಡಾ ಸೇರಿಸುವೆ. ಬ್ರಿಟಿಷ್ ಸರಕಾರವು ಸ್ವೇಚ್ಛೆಯಿಂದ ಇಲ್ಲವೆ ಜನರ ಒತ್ತಾಯದಿಂದ ನಿರ್ಣಯವನ್ನು ಬದಲಿಸಿದರೆ ಆಗ ಉಪವಾಸವು ನಿಲ್ಲಿಸಲ್ಪಡುವದು. ಅದರಂತೆ ಅಸ್ಪೃಶ್ಯ ಪ್ರತಿನಿಧಿಗಳು ಸಾಮಾನ್ಯ ಮತದಾರ ಸಂಘದಿಂದ ಆರಿಸಿ ಬರಬೇಕು. ಪ್ರತ್ಯೇಕ ಮತದಾರ ಸಂಘವು ತಿರುಗಿ ತೆಗೆದುಕೊಳ್ಳಲ್ಪಡಬೇಕು. ಆಗ ಮಾತ್ರ ಉಪವಾಸವು ನಿಲ್ಲಿಸಲ್ಪಡುವದು. ಸಪ್ಟಂಬರ ೨೦ನೇ ತಾರೀಖಿನ ಮಧ್ಯಾಹ್ನದ ೨ ಗಂಟೆಗೆ ಪ್ರಾರಂಭಿಸಲ್ಪಡುವದು. ಮೇಲೆ ಹೇಳಿದಂತೆ ನಿರ್ಣಯವಾದರೆ ಉಪವಾಸವು ಕೈಕೊಳ್ಳಲ್ಪಡುವದಿಲ್ಲ. ಇದನ್ನು ತಂತಿಯಿಂದ ಕಳಿಸಿದ್ದೇನೆ. ವಿಚಾರ ಮಾಡಲು ನಿಮಗೆ ಸಾಕಷ್ಟು ಸಮಯವು ಇರುವದು. ಈ ವಿಷಯವು ಹೋರರ ಪತ್ರದಲ್ಲಿ ಬರೆದಂತೆ ಉಳಿದವರಾರಿಗೂ ಗೊತ್ತಿಲ್ಲ. ಅದರಂತೆ ಪ್ರಸಿದ್ಧವಾಗಲಿ.

ಮುಕ್ತತೆಯ ಸಲುವಾಗಿ ನಾನು ಇದನ್ನು ಕೈಕೊಂಡಿಲ್ಲ. ಇದನ್ನು ಕೈಕೊಳ್ಳುವಾಗ ನನಗೆ ಬಹಳ ಕೆಡಕೆನಿಸಿದೆ. ನಾನು ಧರ್ಮಿಷ್ಠನಿದ್ದುದರಿಂದ ಇದರ ಹೊರ್ತು ಬೇರೊಂದು ಮಾರ್ಗ ನನಗೆ ಉಳಿದಿಲ್ಲ. ತೊಂದರೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಸರಕಾರವು ನನ್ನನ್ನು ಬಿಟ್ಟರೂ, ನನ್ನ ಉಪವಾಸವು ನಡೆದೇ ನಡೆಯುವದು. ಇದನ್ನು ನಾನು ಮೊದಲೇ ತಿಳಿಸಿರುತ್ತೇನೆ. ಅಪಮಾನ ಕಾರಕವಾದ ಯಾವದೇ ಮಾರ್ಗದಿಂದ ಹೊರಬರುವ ಇಚ್ಛೆ ನನ್ನದಿಲ್ಲ. ಸರಕಾರದ ನಿರ್ಣಯದ ಪ್ರತೀಕಾರವನ್ನು ಮಾಡಲು ಇದೊಂದೇ ಸಾಧನ ನನಗುಳಿದಿದೆ. ಅಸ್ಪೃಶ್ಯ ವರ್ಗದವರಿಗೆ ಸ್ವತಂತ್ರ ಮತದಾರ ಸಂಘಕೊಡುವದು ಹಿಂದೂಧರ್ಮದ ದೃಷ್ಟಿಯಿಂದ ಹಾನಿಕರವೆಂದು ನನ್ನ ಬುದ್ಧಿಗೆ ಭ್ರಮೆಯಾಗಿರುವ ಸಂಭವವಿದೆ. ಹೀಗಿದ್ದರೆ ನನ್ನ ಜೀವನದ ಉಳಿದ ವಿಷಯಗಳಲ್ಲಿಯೂ ನನ್ನ ಮತಗಳು ತಪ್ಪಾದಾವು. ಹೀಗೆ ನನ್ನ ಉಪವಾಸದಿಂದ ಬಂದ ಮರಣ ನನ್ನ ತಪ್ಪಿನ ಪ್ರಾಯಶ್ಚಿತ್ತರೂಪ ಯಜ್ಞವೆಂದು ನಿರ್ಣಯಿಸೀತು. ನನ್ನ ಮೇಲೆ ಮಕ್ಕಳಂತೆ ಶ್ರದ್ಧೆಯನ್ನಿಟ್ಟ ಅಸಂಖ್ಯ ಸ್ತ್ರೀ-ಪುರುಷರ ಮನದ ಭಾರ ಕಡಿಮೆಯಾದೀತು. ಒಂದು ವೇಳೆ ನನ್ನ ನಿರ್ಣಯವೇ ಸರಿಯಿದ್ದರೆ—ಅದು ನಿಃಸಂಶಯವಾಗಿಯೂ ಸರಿಯೇ ಇದೆ—ನಾನು ಯೋಚಿಸಿದ ಉಪಾಯವು ನನ್ನ ಜೀವನದ ಪರಿಪಕ್ವಫಲವೆಂದು ನಾನು ತಿಳಿಯುವೆ. ಇದರಲ್ಲಿ ನಾನು ಈ ಇಪ್ಪತ್ತೈದು ವರ್ಷ ಈ ಜೀವನದ ಉದ್ದೇಶಕ್ಕಾಗಿಯೇ ಹೋರಾಡಿ ಯಶಸ್ವಿಯಾಗಿದ್ದೇನೆ.

೧೮ ನೇ ಅಗಷ್ಟ, ೩೨ ಮೋ. ಕ. ಗಾಂಧಿ

————

## ಮ್ಯಾಕ್ಡೊನಾಲ್ಡರ ಉತ್ತರ

೧೦ ಡೌನಿಂಗ ಸ್ಟ್ರೀಟ
೮ನೇ ಸಪ್ಟಂಬರ, ೧೯೩೨

ಪ್ರಿಯ ಮಿತ್ರ ಗಾಂಧಿ,

ತಮ್ಮ ಓಲೆಯನ್ನೋದಿ ವಿಷಾದವೂ ಆಶ್ಚರ್ಯವೂ ಆಗಿದೆ.

ನಮ್ಮ ಘೋಷಣೆಯ ಹೇತುವಿನ ಬಗ್ಗೆ ಆದ ತಪ್ಪು ಕಲ್ಪನೆಯೇ ಈ ಓಲೆ ಬರೆಯಿಸಿದೆ ಎಂದು ನನ್ನ ಮತ. ಪ್ರತ್ಯೇಕ ಮತದಾರ ಸಂಘದ ಬಗ್ಗೆ ತಮ್ಮ ಹೃದ್ಗತವೇನಿದೆ ಎಂಬುದು ದುಂಡುಮೇಜಿನ ಪರಿಷತ್ತಿನಲ್ಲಿಯೇ ತಿಳಿದಿದೆ. ನಿಮ್ಮ ಮತದ ಬಹು ಸಂಖ್ಯಾಕರು ಭಾರತದಲ್ಲಿರುವರೆಂಬುದೂ ಗೊತ್ತು. ಆದುದರಿಂದಲೇ ಈ ಪ್ರಶ್ನೆಯನ್ನು ಅತ್ಯಂತ ಕಾಳಜೀಪೂರ್ವಕ ವಿಚಾರ ಮಾಡಿದೆ.

ಅಸ್ಪೃಶ್ಯರ ವಿಷಯಕ್ಕೆ ಸಾಮಾಜಿಕ ರೂಢಿಗಳ ಮೂಲಕ ಅನ್ಯಾಯಗಳಾಗುತ್ತವೆ ಎಂದು ಅನೇಕ ದೂರುಗಳು ಬಂದಿವೆ. ಇದು ತಮಗೂ ಮಾನ್ಯವಿದೆ. ಈ ಪರಿಸ್ಥಿತಿಯಲ್ಲಿ ಅವರ ಪ್ರತಿನಿಧಿಗಳು ಕಾಯದೇ ಮಂಡಳದಲ್ಲಿರುವದು ಅವಶ್ಯ. ಹಾಗೆ ವ್ಯವಸ್ಥೆ ಮಾಡುವದು ಅವಶ್ಯ. ಇದು ನಿಮಗೂ ಮಾನ್ಯ. ಹೀಗೆ ಯೋಚಿಸುವಾಗ ಅವರು ಹಿಂದು ಸಮಾಜದಿಂದ ಒಡೆದು ಹೋಗದಂತೆ ಎಚ್ಚರಿಕೆ ತೆಗೆದುಕೊಳ್ಳಲಾಗಿದೆ.

ಸರಕಾರಿ ಯೋಜನೆಯಂತೆ, ಅಸ್ಪೃಶ್ಯರು ಹಿಂದು ಸಮಾಜದ ಭಾಗವಾಗಿಯೇ ಉಳಿಯುವದು. ಸಮಾನತೆಯ ದೃಷ್ಟಿಯಿಂದ ತಮ್ಮ ಮತಗಳನ್ನೂ ಕೊಡುವರು. ಹೀಗಿದ್ದರೂ ಮೊದಲಿನ ೨೦ ವರ್ಷ ಅಸ್ಪೃಶ್ಯರಿಂದಲೇ ಮರ್ಯಾದಿತ ಪ್ರತಿನಿಧಿಗಳನ್ನು ಆರಿಸುವರು. ಅವರ ಹಕ್ಕುಗಳನ್ನು ಕಾಯಲು ಇದೊಂದೇ ಮಾರ್ಗವೆಂದು ನಮಗೆ ಮನದಟ್ಟಾಗಿದೆ.

ಹೀಗೆ ಪ್ರತ್ಯೇಕ ಮತದಾರ ಸಂಘ ಏರ್ಪಡಿಸಿದ್ದರೂ ಸಾಮಾನ್ಯ ಹಿಂದು ಮತದಾರ ಸಂಘದಿಂದ ಮತಕೊಡುವ ಅಸ್ಪೃಶ್ಯರ ಹಕ್ಕನ್ನು ಕಸಿದುಕೊಂಡಿಲ್ಲ. ಅವರಿಗೆ ಎರಡು ಮತಗಳನ್ನು ಕೊಡಲಾಗಿವೆ. ಅವರು ಬೇರೆಯಾಗಬಾರದೆಂಬುದೇ ಇದರ ಉದ್ದೇಶ. ತಾವು ಅನ್ನುವಂತಹ ಜಾತೀಯ ಮತದಾರ

ಸಂಘವಿದಲ್ಲ. ಅಸ್ಪೃಶ್ಯರನ್ನು ಹಿಂದೂ ಸಮಾಜದಲ್ಲಿಯೇ ಎಣಿಸಿದ್ದರಿಂದಲೂ ಹಿಂದು ಮತದಾರ ಸಂಘದ ಅವರ ಮತವು ಸ್ಥಿರ ಉಳಿದುದರಿಂದಲೂ ಉಚ್ಚ ವರ್ಣೀಯರು ಅವರ ಕಡೆಗೂ ಅವರು ಉಳಿದವರ ಕಡೆಗೂ ಬರಬೇಕಾಗುವದ ರಿಂದ ಐಕ್ಯವು ಸ್ಥಿರವಾಗಿ ಉಳಿಯುವದು.

ಹೊಣೆಗಾರಿಕೆಯ ಪ್ರಾಂತಿಕ ಸರಕಾರದಲ್ಲಿ ಅಧಿಕಾರವು ಬಹುಮತದ ಕೈಯಲ್ಲಿ ಹೋಗುವದು ಸ್ವಾಭಾವಿಕ. ಈ ಪರಿಸ್ಥಿತಿಯಲ್ಲಿ ಅಸ್ಪೃಶ್ಯರಿಗೆ ತಮ್ಮ ಹಕ್ಕುಗಳನ್ನು ಕಾಯ್ದುಕೊಳ್ಳಲು ಅವರ ಪ್ರಾತಿನಿಧ್ಯ ಅವಶ್ಯವೆಂಬ ಮಾತು ಎಲ್ಲರಿಗೂ ಸಮ್ಮತ, ಅವಶ್ಯ. ಈ ಪರಿಸ್ಥಿತಿಯಲ್ಲಿ ಕೆಲವು ಸ್ಥಳಗಳನ್ನು ಕಾದಿಟ್ಟು ಅವರಿಂದಲೇ ಆರಿಸುವ ಯೋಜನೆಮಾಡಿದೆ. ಯಾಕಂದರೆ ಈ ಜನರಿಗೆ ಹೊಣೆಗಾರರಾದ ನಿಜವಾದ ಪ್ರತಿನಿಧಿಗಳು ಉಚ್ಚವರ್ಣದವರ ಮತಾಧಿಕ್ಯದಿಂದ ಆರಿಸಿಬರುವರು.

ಪ್ರತ್ಯೇಕ ಮತದಾರ ಸಂಘ ನಿರ್ಮಿಸಿ ನಿರ್ದಿಷ್ಟ ಅಸ್ಪೃಶ್ಯ ಪ್ರತಿನಿಧಿಗಳು ಆರಿಸಿಬಂದು ಹಿಂದುಮತದಾರ ಸಂಘದ ಮತದಾನದ ಹಕ್ಕು ಉಳಿಯುವದ ರಿಂದ ಈ ಪದ್ಧತಿಯು ಮುಸಲ್ಮಾನ ಮತದಾರ ಸಂಘಕ್ಕಿಂತ ತೀರ ಭಿನ್ನ ವೆಂಬುದು ಮೇಲೆ ಕಾಣುತ್ತದೆ. ಮುಸಲ್ಮಾನನು ಸಾಮಾನ್ಯ ಮತದಾರ ಸಂಘದಿಂದ ಎಂದೂ ಮತಕೊಡಲಾರನು. ಅಸ್ಪೃಶ್ಯನು ಮತಕೊಡಲು ಶಕ್ತನಿದ್ದುದಲ್ಲದೆ ಉಮೇದವಾರನಾಗಿಯೂ ನಿಲ್ಲಬಲ್ಲನು. ಅವರಂತೆ ಇವರಿಗೆ ಸ್ಥಳಗಳನ್ನು ಹಂಚದೆ ಕೆಲವನ್ನು ಕಾದಿಡಲಾಗಿದೆ.

ತಮ್ಮ ಈ ಆಮರಣ ಉಪವಾಸ ಯಾತಕ್ಕೋಸುಗ ? ಎಲ್ಲ ಹಿಂದು ಗಳೊಡನೆಯೇ ಅವರಿಗೂ ಮತದಾನವಿರಬೇಕೆಂದೋ ? ಈ ವ್ಯವಸ್ಥೆಯು ಆಗಿದೆ. ಹಿಂದುಗಳಲ್ಲಿ ಐಕ್ಯ ಉಳಿಯಬೇಕೆಂದೋ ? ಅದಕ್ಕೂ ವ್ಯವಸ್ಥೆ ಇದೆ. ಕೇವಲ ಅಸ್ಪೃಶ್ಯರೇ ತಮ್ಮ ನಿರ್ದಿಷ್ಟ ಪ್ರತಿನಿಧಿಗಳನ್ನು ಆರಿಸುವ ಯೋಜನೆಯ ವಿರುದ್ಧವೇ ನಿಮ್ಮ ಈ ಬ್ರಹ್ಮಾಸ್ತ್ರ. ಈ ವರ್ಗದ ಮೇಲೆ ಭಯಂಕರ ಅನ್ಯಾಯವಾಗುತ್ತಿದೆ ಎಂಬುದು ಎಲ್ಲರಿಗೂ ಮಾನ್ಯವಿದೆ. ಈ ವರ್ಗದ ಭವಿತವ್ಯವು ಕಾಯಿದೆ ಮಂಡಳವನ್ನು ಅವಲಂಬಿಸಿದೆ ಎಂಬುದನ್ನು ಲಕ್ಷ್ಯದಲ್ಲಿಟ್ಟು ಅತ್ಯಂತ ವಿಚಾರಪೂರ್ವಕವಾಗಿ ದಾರಿಯನ್ನು ಹುಡುಕಿರಲು

ತಾವು ಇಂತಹ ನಿರ್ಣಯಕ್ಕೆ ಬಂದುದೆ ನನಗೆ ತಿಳಿಯದಾಗಿದೆ. ವಸ್ತು ಸ್ಥಿತಿಯ ತಪ್ಪು ತಿಳುವಳಿಕೆಯಿಂದ ತಾವು ಹೀಗೆ ಮಾಡುತ್ತಿರುವಿರೆಂದು ನಾನು ತಿಳಿಯುವೆ.

ನಿಮ್ಮ ನಿಮ್ಮಲ್ಲಿ ಒಪ್ಪಂದವಾಗುವ ಪ್ರಯತ್ನಗಳೆಲ್ಲ ನಿಷ್ಫಲವಾದುದರಿಂದ ಸರಕಾರವು ಅನಿವಾರ್ಯವಾಗಿ ಹಿಂದೀ ಪ್ರತಿನಿಧಿಗಳ ಬೇಡಿಕೆಯಂತೆ ಈ ಅಲ್ಪ ಸಂಖ್ಯಾಕರ ಪ್ರಶ್ನೆಯಲ್ಲಿ ಕೈ ಹಾಕಬೇಕಾಯಿತು. ಅವರು ಈಗ ನಿರ್ಣಯ ಕೊಟ್ಟಿರುವರು. ಈ ನಿರ್ಣಯದಲ್ಲಿ ಹೇಳಿದ ಕರಾರುಗಳು ಪೂರ್ಣವಾಗದೆ ಸರಕಾರವು ಈ ನಿರ್ಣಯವನ್ನು ಬದಲಿಸುವದೆಂದು ಅಪೇಕ್ಷಿಸುವುದೇ ಶಕ್ಯವಿಲ್ಲ. ಆದುದರಿಂದ ಸರಕಾರದ ನಿರ್ಣಯದಲ್ಲಿ ಬದಲಾಗಿಲ್ಲವೆಂದು ತಮಗೆ ತಿಳಿಸದೆ ನನಗೆ ಗತ್ಯಂತರವಿಲ್ಲ. ಸರಕಾರವು ನಿಶ್ಚಯಿಸಿದ ಚುನಾವಣೆಯ ಪದ್ಧತಿಯಲ್ಲಿ ಬದಲಾವಣೆಯಾಗಬೇಕಾದರೆ, ಈ ವಿಷಯದಲ್ಲಿ ನಿಯಮಿಸಿದ ಕಮಿಟಿಯೇ ತಮ್ಮತಮ್ಮಲ್ಲಿ ಕರಾರುಗಳನ್ನು ಮಾಡಿಕೊಂಡು ಚುನಾವಣೆಯ ಹೊಸ ಪದ್ಧತಿಯನ್ನು ಸೂಚಿಸಬೇಕಾಗುವದು.

ನೀವು ಈ ಪತ್ರವ್ಯವಹಾರವನ್ನು ಪ್ರಸಿದ್ಧಿಸಲು ಕೇಳಿರುವಿರಿ. ಆದರೆ ನೀವು ಏಕೆ ಉಪವಾಸ ಮಾಡುತ್ತಿರುವಿರೆಂಬುದನ್ನು ಸೆರೆಯಲ್ಲಿರುವ ನೀವು ಜನತೆಗೆ ವಿವರಿಸಲು ಶಕ್ಯವಿಲ್ಲ. ಆದರೆ ಇದು ಅನ್ಯಾಯವೆಂದು ನನಗೆ ಅನಿಸುತ್ತದೆ. ಆದುದರಿಂದ ನೀವು ಇನ್ನೊಮ್ಮೆ ನನಗೆ ಸೂಚಿಸಿದರೆ, ನಾನು ಇದನ್ನು ಮನ್ನಿಸುವೆ. ಆದರೆ, ಸರಕಾರದ ನಿರ್ಣಯವನ್ನು ವಿವರವಾಗಿ ಮತ್ತೊಮ್ಮೆ ವಿಚಾರ ಮಾಡಬೇಕೆಂದೂ ತಾವು ಕೈಕೊಂಡ ಯೋಜನೆಯು ನಿಜವಾಗಿಯೂ ಸಮರ್ಥನೀಯವಿದೆಯೇ ಎಂಬ ಪ್ರಶ್ನೆಯನ್ನು ಸ್ವತಃ ಆಳವಾಗಿ ವಿಚಾರ ಮಾಡಬೇಕೆಂದೂ ಆಗ್ರಹದಿಂದ ಕೇಳಿಕೊಳ್ಳುತ್ತೇನೆ.

ಜೆ. ರ್‍ಯಾಮ್ಸೆ ಮ್ಯಾಕ್ಡೊನಾಲ್ಡ

---

# ಗಾಂಧೀಜಿಯುವರ ಕೊನೆಯ ಉತ್ತರ

ಪ್ರಿಯ ಗೆಳೆಯ,

ನೀವು ತಂತಿಯ ಮೂಲಕ ಕಳಿಸಿದ ಬಿಚ್ಚುಮನದ ಪತ್ರ ಪೂರ್ಣವಾಗಿ ಬಂತು. ನನ್ನ ಮನಸ್ಸಿಗೆ ಹೊಳೆಯದಿದ್ದ ಅರ್ಥವೊಂದನ್ನು ನನ್ನ ಪ್ರಾಯೋಪವೇಶಕ್ಕೆ ನೀವು ಮಾಡಿದೀರಿ. ಯಾರ ವಿನಾಶಕ್ಕಾಗಿ ನಾನೀ ಉಪವಾಸ ಕೈಗೊಂಡಿದ್ದೇನೆ ಎಂದು ನೀವು ಅನ್ನುತ್ತೀರೋ ಅವರ ಪರ ವಾಗಿಯೇ ಅವರ ಕ್ಷೇಮಕ್ಕಾಗಿಯೇ ನಾನಿದನ್ನು ಕೈಗೊಂಡಿದ್ದೇನೆ. ಈ ಆತ್ಯಂತಿಕ ವಿಧಾನವೇ ಅಂಥ ಸ್ವಾರ್ಥದ ಆರೋಪಣೆಗೆ ಅಡ್ಡಿಯಾದೀತು. ಎಂದು ನಾನು ನಂಬಿದ್ದಿಲ್ಲ. ನನಗಿದು ಧರ್ಮದ ವಿಷಯ; ಈ ಮಾತನ್ನು ಬಿನ್ನಯಿಸುವುದಿಲ್ಲ. ಘಂಟಾಘೋಷವಾಗಿ ಹೇಳುತ್ತೇನೆ. ದಲಿತವರ್ಗಕ್ಕೆ ಎರಡೆರಡು ವೋಟುಕೊಟ್ಟ ಮಾತ್ರಕ್ಕೆ ದಲಿತವರ್ಗದ ರಕ್ಷಣೆಯಾಗಲಿಲ್ಲ. ಹಿಂದೂ ಸಮಾಜ ಛಿದ್ರವಾಗುವುದು ತಪ್ಪಲಿಲ್ಲ. ದಲಿತವರ್ಗಕ್ಕೆ ಪ್ರತ್ಯೇಕ ಚುನಾವಣೆ ಏರ್ಪಟ್ಟರೆ ಅವರಿಗೆ ಕಿಂಚಿತ್ತೂ ಹಿತವಾಗದೆ, ಹಿಂದೂ ಸಮಾಜ ವನ್ನು ನಾಶಗೊಳಿಸುವ ವಿಷವನ್ನು ಕುಡಿಸಿದಂತಾದೀತೆಂದು ನನಗೆ ಅನಿಸುತ್ತಿದೆ.

ನಿಮಗೆ ಎಷ್ಟೋ ಸಾನುಭೂತಿಯಿದ್ದರೂ ಇಂಥ ಧಾರ್ಮಿಕ ವಿಚಾರದಲ್ಲಿ ನೀವು ಸರಿಯಾದ ತೀರ್ಮಾನಕ್ಕೆ ಬರಲಾರಿರಿ ಎಂದು ಹೇಳಬಯಸುತ್ತೇನೆ. ದಲಿತವರ್ಗಕ್ಕೆ ಅವರಿಗೆ ಕೊಡಬೇಕಾದ್ದಕ್ಕಿಂತ ಹೆಚ್ಚು ಪ್ರಾತಿನಿಧ್ಯವನ್ನು ಕೊಟ್ಟರೂ ನನಗೆ ಚಿಂತೆಯಿಲ್ಲ. ಹಿಂದೂ ಸಮಾಜದಲ್ಲಿ ಅವರು ಇರುವ ವರೆಗೆ, ಎಷ್ಟೇ ಪರಿಮಿತ ರೀತಿಯಲ್ಲಾಗಲಿ ಅವರನ್ನು ಶಾಸನಪೂರ್ವಕವಾಗಿ ಬೇರೆ ಮಾಡಿದರೆ ನಾನು ವಿರೋಧಿಸುತ್ತೇನೆ.

ನೀವು ಹಾಗೆ ತೀರ್ಮಾನ ಮಾಡಿದರೆ ಏನಾಗುತ್ತದೆ ಗೊತ್ತೆ ? ಇಷ್ಟು ದಿನ ಈ ದಲಿತ ಸೋದರರ ಉದ್ಧಾರಕ್ಕಾಗಿ ಹಿಂದೂ ಸುಧಾರಕರು ಅರ್ಪಣ

ಬುದ್ಧಿಯಿಂದ ಮಾಡಿದ ಕಾರ್ಯವೆಲ್ಲ ಬೂದಿಯಲ್ಲಿ ಹೋಮ ಮಾಡಿದಂತೆ ಆಗುತ್ತದೆ.

ಅಂತೇ, ನಾನು ಮೊದಲೇ ತಿಳಿಸಿದ ನಿರ್ಧಾರದಂತೆ, ನಡೆಯಲೇ ಬೇಕಾಗಿದೆ.

ನಿಮ್ಮ ನಿರ್ಣಯದಲ್ಲಿ ದಲಿತವರ್ಗದ ಮಾತು ಒಂದನ್ನು ಮಾತ್ರ ಎತ್ತಿ ಕೊಂಡಿದೇನೆ. ಇದರಿಂದ ಉಳಿದ ಅಂಶಗಳೆಲ್ಲ ನನಗೆ ಒಪ್ಪಿಗೆಯೆಂದು ಅರ್ಥವಲ್ಲ. ಉಳಿದವೂ ಬಹಳ ಆಕ್ಷೇಪಣೀಯವೇ. ಆದರೆ ದಲಿತವರ್ಗದ ಬಗ್ಗೆ ಈ ಆತ್ಮಾಹುತಿ ಮಾಡೆಂದು ನನ್ನ ಅಂತರಾತ್ಮ ಪ್ರೇರೇಪಿಸಿದಂತೆ ಅವು ಮಾಡಲಾರವು.

ಯರವಡಾ
೯—೯—೩೨

ನಿಮ್ಮ ಗೆಳೆಯ
ಮೋ. ಕ. ಗಾಂಧಿ

---

## ಮುಂಬಯಿ ಸರಕಾರಕ್ಕೆ

[ ಗಾಂಧೀಜಿಯವರು ಅಸ್ಪೃಶ್ಯತೆಯ ಪ್ರಶ್ನೆಯ ವಿಷಯವಾಗಿ ಉಪವಾಸ ಕೈಕೊಳ್ಳುವ ವಿಷಯವನ್ನು ಮುಂಬಯಿ ಸರಕಾರಕ್ಕೆ ೧೫ನೇ ಸಪ್ಟಂಬರ ದಿನ ಪತ್ರಬರೆದು ತಿಳಿಸಿದರು. ಅದನ್ನು ಸರಕಾರವು ಪ್ರಕಟಿಸಿತು. ]

"ದೇವರನ್ನು ಸ್ಮರಿಸಿ, ಆತನ ಪ್ರೇರಣೆಯಿಂದ ಆತನ ಪ್ರೀತ್ಯರ್ಥವಾಗಿ ಈ ಉಪವಾಸವನ್ನು ಕೈಕೊಳ್ಳುತ್ತಿದ್ದೇನೆಂದು ನಮ್ರವಾಗಿ ಬಿನ್ನವಿಸುತ್ತೇನೆ. ಜನಸಂಘಟನೆಯ ದೃಷ್ಟಿಯಿಂದ ಉಪವಾಸದ ದಿನವನ್ನು ಮುಂದೂಡಲು ಮಿತ್ರರು ಸೂಚಿಸಿದ್ದಾರೆ. ಅದು ಶಕ್ಯವಿಲ್ಲ. ಮುಖ್ಯಮಂತ್ರಿಗಳಿಗೆ ನಾನು ತಿಳಿಸಿದ ಕಾರಣಕ್ಕಾಗಿ ವೇಳೆಯನ್ನು ಕೂಡ ಬದಲು ಮಾಡಲು ಶಕ್ಯವಿಲ್ಲ.

ಪರಕೀಯರೇ ಇರಲಿ, ಸ್ವದೇಶಿಯರೇ ಇರಲಿ ಯಾರು ನನ್ನ ನೀತಿ ವಿಶ್ವಾಸವಿಟ್ಟಿರುವರೋ ಅವರ ವಿರುದ್ದ ಈ ಉಪವಾಸವಿದೆ. ಆದರೆ ಇಂಗ್ಲೀಷ ಅಧಿಕಾರಿಗಳ ವಿರುದ್ಧ ಈ ಉಪವಾಸವಿರುವದಿಲ್ಲ. ಈ ಅಧಿಕಾರ ವರ್ಗವು ವಿಪರೀತ ಕಲ್ಪನೆಯನ್ನು ಹರಡುತ್ತಿರುವಾಗಲೂ ಯಾವ ಅನೇಕ ಇಂಗ್ಲೀಷ ಸ್ತ್ರೀ ಪುರುಷರು ನನ್ನ ಬಗ್ಗೆ, ನನ್ನ ಕಾರ್ಯದ ನ್ಯಾಯಬುದ್ಧಿಯ ಬಗ್ಗೆ ವಿಶ್ವಾಸ ತಾಳಿರುವರೋ ಅವರ ವಿರುದ್ಧವಾಗಿ ಈ ಉಪವಾಸವಿರುತ್ತದೆ. ಆದುದರಿಂದ ನನ್ನಲ್ಲಿ ವಿಶ್ವಾಸವಿಲ್ಲದವರು ಹಿಂದಿಯರೇ ಇರಲಿ ಪರಕೀಯರೇ ಇರಲಿ ಅವರ ವಿರುದ್ಧ ಈ ಉಪವಾಸವಿಲ್ಲ. ಆದರೆ ನನ್ನ ನ್ಯಾಯಬುದ್ಧಿಯ ಮೇಲೆ ವಿಶ್ವಾಸವಿದ್ದ ಹಿಂದೀಯರ ವಿರುದ್ಧ ಈ ಉಪವಾಸವಿದೆ. ಒಟ್ಟಿನಲ್ಲಿ ಸತ್ಯಧರ್ಮದ ಕಡೆಗೆ ಪ್ರವೃತ್ತಿಯುಂಟಾಗಬೇಕೆಂದೂ, ಹಿಂದೂ ಜನರ ಸದಸದ್ವಿವೇಕವು ಜಾಗ್ರತಗೊಳ್ಳಬೇಕೆಂದೂ ಈ ಉಪವಾಸವು ಕೈಕೊಳ್ಳಲ್ಪಟ್ಟಿದೆ.

ಕೇವಲ ಭಾವನಾಪ್ರಧಾನನಾಗಿ ಇದನ್ನು ನಾನು ಸುರುವು ಮಾಡಿಲ್ಲ. ಶುದ್ಧ ಹಾಗು ನ್ಯಾಯವಾದ ತಕ್ಕಡಿಯಲ್ಲಿ ನನ್ನಲ್ಲಿದ್ದ ಸಾಮರ್ಥ್ಯವನ್ನೆಲ್ಲ ಹಚ್ಚಲು ಇದನ್ನು ಕೈಕೊಂಡಿದ್ದೇನೆ. ಆದುದರಿಂದ ನನ್ನ ಜೀವವನ್ನು ಉಳಿಸಲು ಹೆಚ್ಚು ಯೋಚನೆಯನ್ನು ಯಾರೂ ಮಾಡಬಾರದು. "ದೇವರ ಇಚ್ಛೆಯ ವಿರುದ್ಧ ಹುಲ್ಲು ಕಡ್ಡಿಯು ಕೂಡ ಅಲ್ಲಾಡಲಾರದು." ಎಂಬ ಮಾತಿನಲ್ಲಿಯ ಸತ್ಯತೆಯ ಮೇಲೆ ನನ್ನ ಪೂರ್ಣ ವಿಶ್ವಾಸವಿದೆ. ಈ ದೇಹದಿಂದ ಇನ್ನೂ ಸೇವೆಯನ್ನು ತೆಗೆದುಕೊಳ್ಳುವ ಇಚ್ಛೆ ಆತನಿಗಿದ್ದರೆ, ಅವನು ರಕ್ಷಿಸಿಯೇ ರಕ್ಷಿಸುವನು. ಅವನ ಇಚ್ಛೆಯ ವಿರುದ್ಧ ಯಾರೂ ರಕ್ಷಣೆ ಮಾಡಲಾರರು. ನನ್ನ ಶರೀರವು ಇನ್ನೂ ಕೆಲದಿನ ಬಾಳುವ ಶಕ್ತಿಯುಳ್ಳದಿದೆ ಎಂದು ನನ್ನ ಅನುಭವವು ಹೇಳುತ್ತಿದೆ.

ಪ್ರತ್ಯೇಕ ಮತದಾರಸಂಘವು ನಮ್ಮ ಅಧಃಪತನದ ಕೊನೆಯ ಗಳಿಗೆ. ಈ ಸಮಯದಲ್ಲಿ ಸವರ್ಣ ಹಾಗು ಅಸ್ಪೃಶ್ಯ ಮುಂದಾಳುಗಳು ಏನಾದರೂ ಗಡಿಬಿಡಿ ಮಾಡಿ ತೇಪೆಯನ್ನು ಜೋಡಿಸುವ ಕರಾರುಗಳನ್ನು ಮಾಡಿಕೊಂಡರೆ, ನನ್ನ ಉದ್ದೇಶವು ಸಫಲವಾಗಲಾರದು. ಆದರೆ ಈ ಕರಾರುಗಳು ಸತ್ಯಾಧಿಷ್ಠಾನವಿದ್ದು ಗಟ್ಟಿಮುಟ್ಟಿಯಾಗಿರಬೇಕು. ಅಸ್ಪೃಶ್ಯತೆಯನ್ನು

ಸಮೂಲ ನಾಶಮಾಡುವ ಇಚ್ಛೆ ಹಿಂದು ಮುಂದಾಳುಗಳಿಗೆ ಇಲ್ಲದಿದ್ದರೆ, ಅವರು ಏನೂ ಸಂಕೋಚವನ್ನು ತಾಳದೆ ನನ್ನನ್ನು ಬಲಿಗೊಡಬೇಕು.

ಸಂಯುಕ್ತ ಮತದಾರ ಸಂಘದ ವಿರುದ್ಧವಿದ್ದ ಜನರ ಮೇಲೆ ಯಾವ ಬಗೆಯ ಒತ್ತಾಯವೂ ಆಗ ಕೂಡದು. ವಿರೋಧಕರ ಹೃದ್ಗತವನ್ನು ನಾನು ಅರಿತಿರುವೆ. ನನ್ನಲ್ಲಿ ಅವಿಶ್ವಾಸವನ್ನು ತಾಳಲು ಅವರಿಗೆ ಅಧಿಕಾರ ವಿದೆ. ಅಸ್ಪೃಶ್ಯರನ್ನು ನಾಶಕ್ಕೆ ನೂಕುವ ಹೀನ ಕೃತ್ಯಗಳನ್ನೆಸಗುತ್ತಿರುವ ಜಾತಿಯವನೇ ನಾನಲ್ಲವೇ ? ಹೀಗಿದ್ದೂ ಅವರು ಇನ್ನೂ ನಮ್ಮ ಸಮಾಜದಲ್ಲಿದ್ದುದೇ ಆಶ್ಚರ್ಯ. ಅವರ ವಿರೋಧವು ಸಮರ್ಥನೀಯ ವಿದ್ದರೂ ಅವರೊಂದು ತಪ್ಪು ಮಾಡುತ್ತಿದ್ದಾರೆ. ಇಂದು ಅವರು ಮನಸ್ಸು ಮಾಡಿದರೆ ಹಿಂದುಗಳಿಂದ ಬೇರೆಯಾಗಬಹುದು. ತಮ್ಮದೊಂದು ವರ್ಗ ವನ್ನೇ ನಿರ್ಮಿಸಬಹುದು. ಹೀಗೆ ಮಾಡುವದರಿಂದ ಅವರ ಹಿತ ಸಾಧಿಸುತ್ತಿದ್ದರೆ ನಾನು ಅಲಕ್ಷಿಸಬಹುದಿತ್ತು. ಆದರೆ ಅವರನ್ನು ಸವರ್ಣ ಹಿಂದುಗಳಿಂದ ಬೇರ್ಪಡಿಸುವದು ಶಕ್ಯವೇ ಇಲ್ಲ. ಅವರ ಹಿತ ಸಂಬಂಧಗಳು ಹಾಸುಹೊಕ್ಕುಗಳಾಗಿವೆ. ಯಾರ ಮಧ್ಯದಲ್ಲಿ ಅವರು ವಾಸಿಸುವರೋ, ಯಾರ ಸಲುವಾಗಿ ಅವರು ಬಾಳುವರೋ ಅವರಿಂದ ಅವರನ್ನು ಬೇರ್ಪಡಿಸುವ ಬಗೆ ಹೇಗೆ ? ಅವಿಭಕ್ತ ಕುಟುಂಬದಲ್ಲಿಯ ಒಂದು ಘಟಕ ಅವರು. ಇಂದು ಅವರು ಯಾವ ಧರ್ಮದಲ್ಲಿರುವರೋ ಆ ಹಿಂದೂಧರ್ಮದ ವಿರುದ್ಧ ಬಂಡೆಬ್ಬಿಸಿರುವರು. ಹಿಂದೂ ಧರ್ಮವನ್ನೇ ತ್ಯಾಗ ಮಾಡಲು ಸಿದ್ಧರಾಗಿರುವರು. ಇದರ ಮೂಲವೇನಿದೆಯೆಂಬುದನ್ನು ನಾನು ಬಲ್ಲೆ. ಹಿಂದೂ ಧರ್ಮದಲ್ಲಿಯ ಕೆಲ ಅನಿರ್ವಚನೀಯ ತತ್ವಗಳು ಮತ್ತು ಅನುಭವಗಳು ಅವರನ್ನು ಧರ್ಮಾಂತರ ಮಾಡಗೊಡಲಾರವು. ಯಾರಿಗೆ ಈ ತತ್ವಗಳ ಪೂರ್ಣ ಅನುಭವವಿರುವದೋ ಅವರು ಅಸ್ಪೃಶ್ಯರನ್ನು ಹಿಂದೂ ಸಮಾಜದಿಂದ ಬೇರ್ಪಡಿಸುವ ವಿಚಾರವನ್ನು ಪ್ರತಿಭಟಿಸುವದು ಅವರ ಕರ್ತವ್ಯವಾಗುತ್ತದೆ. ಈ ಪ್ರತೀಕಾರದಲ್ಲಿ ಪ್ರಾಣ ಹೋದರೂ ಚಿಂತೆಯಿಲ್ಲ; ಈ ಪ್ರತೀಕಾರದ ವಿರುದ್ಧ ಆಕ್ಷೇಪಗಳ ಮಳೆಯೇ ಸುರಿಯಬಹುದು. ಅಸ್ಪೃಶ್ಯ ವರ್ಗವನ್ನು ಬೇರ್ಪಡಿಸುವ ವಿಚಾರದ ವಿರುದ್ಧ ಪ್ರತಿರೋಧಿಸುವದೆಂದರೆ ಹಿಂದೂ ಸಮಾಜದಲ್ಲಿ ಅಸ್ಪೃಶ್ಯರಿಗೆ ಯಾವ ನಿರ್ಬಂಧವೂ ಇಲ್ಲದ ಪೂರ್ಣ ಸ್ವಾತಂತ್ರ್ಯವು

ದೊರೆಯುವಂತೆ ಮಾಡುವದೇ. ಈ ವಿಷಯದಲ್ಲಿ ವಿಶ್ವಾಸಘಾತ ಮಾಡಿದರೆ ನಮ್ಮ ಪ್ರಾಣಗಳನ್ನು ಕೆಲದಿನ ಮುಂದಕ್ಕೆ ಹಾಕಿದಂತೆ ಮಾತ್ರ. ಸಾಮಾಜಿಕ ರಾಜಕೀಯ—ನಾಗರಿಕತೆಯ ದೃಷ್ಟಿಯಿಂದ ಅಸ್ಪೃಶ್ಯ ವರ್ಗದ ಮೇಲೆ ಇಂದು ಆಗುತ್ತಿರುವ ಅನ್ಯಾಯಗಳ ಪರಿಮಾರ್ಜನೆಗಾಗಿ ಪ್ರಾಣಾಂತಿಕ ಉಪವಾಸದ ಸತ್ಯಾಗ್ರಹವನ್ನು ಆಚರಿಸುವವ ನಾನೊಬ್ಬನೇ ಅಲ್ಲ, ನನ್ನಂತಹ ವಿಚಾರಸರಣಿಯುಳ್ಳ ಅನೇಕ ಸುಧಾರಕರು ಭಾರತದಲ್ಲಿರುವರು. ಅವರೆಲ್ಲರು ಈ ಮಾರ್ಗವನ್ನನುಸರಿಸದೇ ಇರಲಾರರು ಎಂಬುದನ್ನು ಹೊಣೆಗಾರ ಹಿಂದೂ ಮುಖಂಡರು ವಿಚಾರ ಮಾಡಬೇಕು. ನನ್ನೊಡನೆ ಕಾರ್ಯ ಮಾಡಿದ ಸುಧಾರಕರೂ, ಈ ಉಪವಾಸದ ಮರ್ಮವನ್ನರಿಯಬೇಕು.

ನನ್ನ ಮನಸ್ಸಿನಲ್ಲಿ ಭ್ರಮೆ ಅಥವಾ ಜ್ಞಾನ ಉದಯವಾಗಿರಬೇಕು. ಒಂದು ವೇಳೆ ಭ್ರಮೆಯಾಗಿದ್ದರೆ ನಾನು ಅಂತಃಕರಣ ಪೂರ್ವಕವಾಗಿ ಪ್ರಾಯಃಶ್ಚಿತ್ತವನ್ನು ತೆಗೆದುಕೊಳ್ಳಲು ಅನುಕೂಲವಾಗಿ ಹಿಂದೂ ಧರ್ಮದ ಮೇಲಿನ ಒಂದು ಭಾರವು ಇಳಿದಂತಾಗುವದು. ಒಂದು ವೇಳೆ ಜ್ಞಾನೋದಯವೇ ಆಗಿದ್ದರೆ, ನನ್ನ ಕಷ್ಟದಿಂದ ಹಿಂದೂ ಧರ್ಮಕ್ಕೆ ಶುದ್ಧ ಹಾಗೂ ನಿಷ್ಕಲಂಕ ಸ್ವರೂಪ ಪ್ರಾಪ್ತವಾದೀತು. ನನ್ನ ವಿಷಯದಲ್ಲಿ ಅವಿಶ್ವಾಸವಿದ್ದ ಜನರ ಅಂತಃಕರಣವೂ ಶುದ್ಧವಾದೀತು. ಅಸ್ಪೃಶ್ಯ ವರ್ಗಕ್ಕೆ ಯಾವುದೇ ಬಗೆಯ ಕಾಯಿದೇಬದ್ಧ ಸ್ವತಂತ್ರ ಮತದಾರ ಸಂಘ ನಿರ್ಮಾಣವಾಗುವದರ ವಿರುದ್ಧವೇ, ಈ ನನ್ನ ಉಪವಾಸವಿರುತ್ತದೆಂದು ನಾನು ಮತ್ತೊಮ್ಮೆ ಸಾರುತ್ತೇನೆ. ಯಾಕಂದರೆ ನನ್ನ ಉಪವಾಸದ ಬಗ್ಗೆ ತರ್ಕವಿತರ್ಕ, ತಪ್ಪು ತಿಳುವಳಿಕೆ ಉಂಟಾದುದೇ ಈ ಘೋಷಣೆಯ ಉದ್ದೇಶ. ಈ ಭೀತಿಯು ದೂರವಾದೊಡನೆಯೇ ನಾನು ನನ್ನ ಉಪವಾಸವನ್ನು ನಿಲ್ಲಿಸುವೆ. ಈ ಪ್ರಶ್ನೆಯನ್ನು ಬಿಡಿಸುವ ಹಾಗು ಅವರಿಗೆ ಯೋಗ್ಯ ಪ್ರಾತಿನಿಧ್ಯವಿರುವ ನಿಶ್ಚಿತವಾದ ಮಾರ್ಗವು ನನ್ನಲ್ಲಿದೆ. ಆದರೆ ನಾನು ಕೈದಿಯಿರುವದರಿಂದ ಜನರೆದುರಿಗೆ ಅದನ್ನು ಇಡಲು ಅಯೋಗ್ಯನಿರುವೆ. ಸವರ್ಣ ಹಿಂದುಗಳು ಹಾಗು ಅಸ್ಪೃಶ್ಯ ವರ್ಗದ ಮುಖಂಡರೂ ಕೂಡಿ ಸಂಯುಕ್ತ ಮತದಾರ ಸಂಘದ ತತ್ವದ ಮೇಲೆ, ಯಾವದೊಂದು ಕರಾರನ್ನು ಮಾಡಿಕೊಂಡು, ಸರ್ವ

ಹಿಂದುಗಳ ಸಾರ್ವಜನಿಕ ಸಭೆಯಲ್ಲಿ ಅದಕ್ಕೆ ಮಾನ್ಯತೆ ದೊರೆತರೆ ಅದನ್ನು ನಾನು ಒಪ್ಪಲು ಸಿದ್ಧನಿರುವೆ.

ಆದರೆ ನಾನು ಒಂದು ಪ್ರಶ್ನೆಯನ್ನು ಸ್ಪಷ್ಟಮಾಡಬಯಸುತ್ತೇನೆ. ಅಸ್ಪೃಶ್ಯರ ಪ್ರಶ್ನೆಯು ಯೋಗ್ಯ ರೀತಿಯಿಂದ ಬಿಡಿಸಲ್ಪಟ್ಟು ಅದು ನನಗೆ ಮಾನ್ಯವಾದರೆ, ಜಾತಿಯ ಪ್ರಶ್ನೆಯ ವಿಷಯದಲ್ಲಿ ಸರಕಾರವು ಘೋಷಿಸಿದ ಉಳಿದೆಲ್ಲ ಪ್ರಶ್ನೆಗಳನ್ನು ನಾನು ಮಾನ್ಯಮಾಡಿದೆನೆಂದು ತಿಳಿಯಕೂಡದು. ಅದರಲ್ಲಿಯ ಅನೇಕ ಭಾಗಗಳಿಗೆ ನನ್ನ ವೈಯಕ್ತಿಕ ವಿರೋಧವಿದೆ. ಈ ನಿರ್ಣಯವು ಒಂದು ವೇಳೆ ಅಮಲಿನಲ್ಲಿ ಬಂದರೆ ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯು ಸಮಾಧಿಯಾಯಿತೆಂದೇ ನನ್ನ ಮತ. ಈ ಪ್ರಶ್ನೆಯು ಸಮಾಧಾನಕರವಾಗಿ ಬಿಟ್ಟೀತೆಂದು ಮುಂದೆ ಯೋಚಿಸಲ್ಪಡುವ ಎಲ್ಲ ಸುಧಾರಣೆಗಳಿಗೆ ನಾನು ಬದ್ಧನೆಂದೂ ತಿಳಿಯಕೂಡದು. ಈ ಪ್ರಶ್ನೆಯು ರಾಜಕೀಯವಿದ್ದು ಕಾಂಗ್ರೆಸ್ಸು ವಿಚಾರ ಮಾಡಿ ತನ್ನ ಮತವನ್ನು ಕೊಡಬಹುದು ನಾನು ಕೈದಿಯಿರುವದರಿಂದ ಮತ್ತು ಈ ಪ್ರಶ್ನೆಯು ನನ್ನ ವೈಯ್ಯಕ್ತಿಕ ದೃಷ್ಟಿಯಿಂದಲೂ, ನನ್ನ ವಿಚಾರದ ಹೊರಗಿರುವದರಿಂದಲೂ ನಾನು ನನ್ನ ಮತವನ್ನು ಈ ಬಗ್ಗೆ ವ್ಯಕ್ತಮಾಡಲಾರೆ.

ನಾನು ನನ್ನ ಉಪವಾಸಕ್ಕೆ ಈ ಬಗೆಯಾಗಿ ಒಂದು ಸಂಕುಚಿತ ಕ್ಷೇತ್ರ ನಿರ್ಮಿಸಿದ್ದೇನೆ. ಅಸ್ಪೃಶ್ಯರ ಪ್ರಶ್ನೆ ಮುಖ್ಯತಃ ಧಾರ್ಮಿಕ ಪ್ರಶ್ನೆ. ಈ ವಿಷಯವನ್ನು ನಾನು ಆಜನ್ಮ ವಿಚಾರ ಮಾಡಿದ್ದರಿಂದ ಅದು ನನ್ನ ಪ್ರಶ್ನೆಯೆಂದೇ ನಾನು ತಿಳಿಯುವೆ: ಇದು ನನ್ನ ಪವಿತ್ರವಾದ ಇಡುಗಂಟು, ಅದರ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳಲಾರೆ.

ಜ್ಞಾನಪ್ರಾಪ್ತಿ ಹಾಗು ತಪವೆಂದು ಉಪವಾಸ ಮಾಡುವದು ನಮ್ಮ ಪರಂಪರೆ. ಕ್ರಿಶ್ಚಿಯನ್ನ ಹಾಗು ಇಸ್ಲಾಂ-ಧರ್ಮಗಳಲ್ಲಿಯೂ ಈ ರೂಢಿಯನ್ನು ನಾನು ಕಂಡಿದ್ದೇನೆ. ಹಿಂದೂ ಧರ್ಮದಲ್ಲಿ ಪ್ರಾಯಃಶ್ಚಿತ್ತಕ್ಕಾಗಿ ಹಾಗು ಆತ್ಮಶುದ್ಧಿಗಾಗಿ ಉಪವಾಸ ಕೈಕೊಂಡ ಅನೇಕ ಉದಾಹರಣೆಗಳುಂಟು. ಉಪವಾಸ ಮಾಡುವದು ಕರ್ತವ್ಯವೆಂದು ನಿರ್ಣಯಿಸಿದ ನಂತರ ಅದೂ ಒಂದು ಮರ್ಯಾದೆಯ ಸಂಗತಿ ಎಂದು ತಿಳಿಯಬೇಕು. ನಾನು ಈ ವಿಷಯಕ್ಕೆ ಶಾಸ್ತ್ರೀಯ ಸ್ವರೂಪ ಕೊಟ್ಟಿದ್ದೇನೆ. ಆದುದರಿಂದ ಯಾರಾದರೂ

ನನ್ನ ಮೇಲಿನ ಅಂಧ ವಿಶ್ವಾಸದಿಂದ ಇಲ್ಲವೆ, ನನ್ನ ವಿಷಯಕ್ಕಿದ್ದ ಹುಚ್ಚು ಸಹಾನುಭೂತಿಯ ಭಾವನೆಯಿಂದ ಬಲಿಬಿದ್ದು ನನ್ನ ಅನುಕರಣವನ್ನು ಮಾಡಬಾರದೆಂದು ಈ ವಿಷಯದಲ್ಲಿ ತಜ್ಞನೆಂಬ ದೃಷ್ಟಿಯಿಂದ ನನ್ನ ಮಿತ್ರರಿಗೂ, ನನ್ನಲ್ಲಿ ಸಹಾನುಭೂತಿಯುಳ್ಳವರಿಗೂ ಎಚ್ಚರಿಕೆಯನ್ನು ಕೊಡುತ್ತೇನೆ. ಈ ಎಲ್ಲ ಜನರು ನಿಸ್ವಾರ್ಥ ಬುದ್ಧಿಯಿಂದ ಕಾಯಕಷ್ಟವನ್ನು ಮಾಡಿ ಅಸ್ಪೃಶ್ಯರ ಸೇವೆಯನ್ನು ಮಾಡಲಿ. ಉಪವಾಸವನ್ನು ಕೈಕೊಳ್ಳುವ ಪ್ರಸಂಗವೇ ಬಂದಾಗ, ಅವರಿಗೆ ತಾನಾಗಿಯೇ ಸ್ಫೂರ್ತಿಯಾಗುವದು.

ಯಾವುದೇ ವಿಶಿಷ್ಟ ವ್ಯಕ್ತಿಯ ವಿರುದ್ಧವಾಗಲೀ ಅಥವಾ ಮತ್ಸರದಿಂದಾಗಲಿ ಇಲ್ಲವೆ ಕ್ರೋಧದಿಂದಾಗಲಿ ಪ್ರೇರಿತವಾಗಿ ಈ ಉಪವಾಸ ಕೈಕೊಳ್ಳಲ್ಪಟ್ಟಿಲ್ಲ. ಶುದ್ಧ ಬುದ್ಧಿಯಿಂದ ಮಾಡಲ್ಪಟ್ಟಿದೆ. ಇದನ್ನೇ ನನಗೆ ಹೇಳಬೇಕಾಗಿದೆ. ನನ್ನ ದೃಷ್ಟಿಯಿಂದ ಅಹಿಂಸೆಯಲ್ಲಿಯ ಕೊನೆಯ ಅಸ್ತ್ರವಿದು; ಅಹಿಂಸೆಯ ಪ್ರಕಟ ಸ್ವರೂಪವಿದು. ಆದುದರಿಂದ ಈ ವಿವಾದದ ಪ್ರಸಂಗದಲ್ಲಿ ಯಾರು ನನ್ನ ಹಾಗು ನನ್ನ ಕಾರ್ಯದ ವಿರುದ್ಧ ಪತ್ರತ್ವವನ್ನು ತಾಳಿರುವರೊ ಅವರ ವಿರುದ್ಧವಾಗಿ ಯಾರಾದರೂ ಹಿಂಸೆಯನ್ನು ಪ್ರಯೋಗಿಸಿದರೆ ಅವರು ನನ್ನ ಮರಣವನ್ನು ತೀವ್ರ ತರಲು ಕಾರಣರು ಎಂದು ನನ್ನ ಮತ. ಉಳಿದ ವಿಷಯದಲ್ಲಿರದಿದ್ದರೂ ಕೂಡ, ಈ ವಿಷಯದಲ್ಲಿ ನಾನು ಯಶಸ್ವಿಯಾಗಬೇಕೆಂದು ಅಪೇಕ್ಷಿಸುತ್ತಿದ್ದರೆ, ವಿರೋಧಕರೊಡನೆ ನಮ್ರತೆಯಿಂದಲೂ ಸಹಾನುಭೂತಿಯಿಂದಲೂ ನಡೆಯುವದು ಅತ್ಯಂತ ಅವಶ್ಯವಿದೆ.

ಮೋ. ಕ. ಗಾಂಧಿ

# ನರೇಂದ್ರರಿಗೆ

ಭಾರತದ ನರೇಂದ್ರರಲ್ಲಿ ಅನೇಕರ ಪರಿಚಯಭಾಗ್ಯ ನನಗಿದೆ. ಕೆಲವರ ಗೆಳೆತನವೂ ಇದೆ. ಆದರೂ ನರೇಂದ್ರರನ್ನು ಕುರಿತು ಯೋಚಿಸಿದಾಗ ಮನಸ್ಸನ್ನು ಅಧೀರತೆ ಕವಿಯುತ್ತದೆ. ಬ್ರಿಟಿಷ್ ರಾಜ್ಯವನ್ನು ಸೃಷ್ಟಿಸಿದವರು ಇವರು ಎಂಬ ನೋವಿನ ತಿಳಿವು ಅಧೀರತೆಗೆ ಕಾರಣ. ಬ್ರಿಟಿಷರು ಬರುವ ಮೊದಲೂ ಕೆಲವರು ಇದ್ದರು, ನಿಜ. ಆದರೆ ಅವರು ಬಂದ ಮೇಲೆ ಇವರ ಬದುಕು ಸಂಪೂರ್ಣವಾಗಿ ಬ್ರಿಟಿಷರ ದಯಾಧೀನವಾಯಿತು ಆಗ ದೊರೆಗಳಾಗಿದ್ದವರು ಬೆಲೆ ಕೊಟ್ಟಷ್ಟು ದಯಾಪ್ರಸಾದ. ಈಗಿರುವವರಂತೂ ಸಾಮ್ರಾಜ್ಯದ ಸಂತಾನ. ಅವರ ಮೋರೆ ಕೊಂಚ ಗಂಟಾಗಲಿ, ಇವರಿಗೆ ಸರ್ವನಾಶ.

ಆದರೆ ತಾವು ಈಗಿರುವಂತೆ ಸಾಮ್ರಾಜ್ಯ ಯಂತ್ರದ ಹಲ್ಲಿಲ್ಲ, ಜನಾಂಗವ ಅಖಂಡವಾದ ಭಾಗ ಎಂದು ಅವರು ತಿಳಿದರೆ ಇಷ್ಟು ನಿರಾಶರಾಗಬೇಕಾಗಿಲ್ಲ. ರಾಷ್ಟ್ರದ ಅಂಗವಾಗದೆ, ಜನಾಂಗದ ಬೆಂಬಲವಿಲ್ಲದೆ ಇದ್ದರೆ ಆ ಯಂತ್ರ ತಲೆ ಕೆಳಗಾದ ಕೂಡಲೆ ಅವರೂ ಮಾಯವಾದಾರು.

ಬ್ರಿಟಿಷ್ ಜನರ ಇಷ್ಟಾನುಸಾರವಾಗಿಯೋ, ಅಥವಾ ಅವರ ಶಕ್ತಿಗೆ ಮೀರಿದ ಕಾಲನಿಯಮದಿಂದಲೊ ಅಂತು ಸಾಮ್ರಾಜ್ಯ ಅಳಿಯುತ್ತಿದೆ. ಭಾರತವು ಎಂದಿಗೂ ದಸ್ಯುದೇಶವಾಗಿಯೇ ಉಳಿಯಲಾರದು. ನರೇಂದ್ರರು ಕಾಲಕ್ಕನುಸಾರವಾಗಿ ನಡೆಯುವರೊ ? ಸಾಮ್ರಾಜ್ಯ ರಥದ ಗಾಲಿಗೆ ಕಟ್ಟಿಕೊಂಡಿದ್ದಾರೋ ? ಧೈರ್ಯಮಾಡಿ ರಾಷ್ಟ್ರದ ಜೊತೆಗೆ ಸೇರಿದರೆ ರಾಜ್ಯನಷ್ಟದ ಗಂಡಾಂತರವನ್ನು ಇದಿರಿಸಬಹುದು.

ಇದು ಧೀರತನದ ಕೆಲಸ, ನಿಜವೆ. ಹೋಗಲಿ, ಮಧ್ಯಮಾರ್ಗ ತುಳಿಯಬಹುದಲ್ಲ. ತಮ್ಮ ಜನರಿಗೆ ಅಧಿಕಾರ ಹಂಚಿಕೊಟ್ಟು ಅವರ ಪ್ರೀತಿ ಗಳಿಸಬಹುದಲ್ಲ. ಅವರ ನಿರಂಕುಶಾಧಿಕಾರ ಮಾತ್ರ ಎಲ್ಲ ಕಾಲವೂ ಉಳಿಯ

ಲಾರದು; ಉಳಿಸಿಕೊಳ್ಳಲಾರರು. ತಮ್ಮ ಸೀಮೆಯ ಜನರನ್ನು ತೃಪ್ತಿಗೊಳಿಸಿ, ತಮ್ಮ ಆಡಳಿತದಲ್ಲಿ ಅವರ ಸಹಕಾರ ಪಡೆದರೆ ಎಷ್ಟೋ ಅಧಿಕಾರ ಉಳಿದೀತು. ತಮ್ಮ ಜನ ತೀರ ಹಿಂದುಳಿದಿದ್ದಾರೆ, ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂಬ ಟೀಕೆಗೆ ಎಡೆಗೊಡುವುದು ತಪ್ಪು; ನರೇಂದ್ರರಿಗಿದು ತರವಲ್ಲ. ಅವರಿಗೇ ಇದು ಕುಂದಕ. ಸಂಸ್ಥಾನಗಳ ಜನರೂ ಹೊರಗಿನವರೂ ಎಲ್ಲಾ ಒಂದೇ ರಾಸು. ಔದಾರ್ಯದಿಂದ ನರೇಂದ್ರರಿಗೇನೂ ನಷ್ಟವಿಲ್ಲ. ನಿರಂಕುಶಾಧಿಕಾರಕ್ಕೆ ಜೋತುಬಿದ್ದರೆ ಎಲ್ಲವೂ ನಷ್ಟವೆ.

ನರೇಂದ್ರರು ಇಲ್ಲದಂತಾಗಲೆಂದು ನನ್ನ ಬಯಕೆಯಲ್ಲ. ಅವರ ನಿರಂಕುಶಾಧಿಕಾರ—ಹೆಸರಿಗಲ್ಲ, ನಿಜವಾಗಿಯೂ ಯಜಮಾನತನವಾಗಲಿ ಎಂಬ ಪರಿವರ್ತನದಾಸೆ. ಅವರ ಸ್ವೇಚ್ಛಾಧಿಕಾರ ಕೊನೆಗಾಣಬೇಕು. ಎಂಥ ಪುರಾತನ ವಂಶದವರಾಗಲಿ, ಎಷ್ಟೇ ಉತ್ತಮ ವಂಶದವರಾಗಲಿ, ಜನರ ಸ್ವಾತಂತ್ರ್ಯ ಒಬ್ಬ ವ್ಯಕ್ತಿಯ ಇಷ್ಟಕ್ಕೆ ಅಧೀನವಾಗಿರಬಾರದು. ರಾಜನಾಗಲಿ, ಶ್ರೀಮಂತ ಜಾಗೀರದಾರನಾಗಿರಲಿ, ವರ್ತಕನಿರಲಿ, ಯಾರೇ ಆಗಲಿ ಪರಂಪರಾರ್ಜಿತವೂ ಅಂತು ಆಸ್ತಿಗೆಲ್ಲ ಸರ್ವಾಧಿಕಾರಿಯಾಗಿ, ಮನಸ್ಸಿಗೆ ಬಂದಂತೆ ವ್ಯವಸ್ಥೆ ಮಾಡಲಾಗದು. ತನ್ನ ತನ್ನ ಕೌಶಲವನ್ನು ಉಪಯೋಗಿಸಲು ಪ್ರತಿಯೊಬ್ಬನಿಗೂ ಸಂಪೂರ್ಣ ಸ್ವಾತಂತ್ರ್ಯ ಇರಬೇಕು. ನೆರೆಹೊರೆಯವರಿಗೂ ತಮ್ಮ ಚಾತುರ್ಯವನ್ನು ಉಪಯೋಗಿಸಲು ಅಷ್ಟೇ ಅವಕಾಶವಿರಬೇಕು. ಆದರೆ ಒಬ್ಬರ ಕುಶಲತನದ ಲಾಭವನ್ನು ಇನ್ನೊಬ್ಬರು ತಮ್ಮ ಮನಸ್ಸಿಗೆ ಬಂದಂತೆ ಉಪಯೋಗಿಸಿಕೊಳ್ಳಲು ಅಧಿಕಾರವಿಲ್ಲ. ಪ್ರತಿಯೊಬ್ಬನೂ ಜನಾಂಗದ ಒಂದು ಭಾಗ, ಸುತ್ತಲಿನ ಸಮಾಜದ ಅಂಗ. ಅಂತಲೆ ತನಗಾಗಿಯೇ ತನ್ನ ಕುಶಲತೆಯನ್ನು ಉಪಯೋಗಿಸಲಾರ; ತಾನು ಅಂಗವಾದ ಇಡೀ ಸಮಾಜಕ್ಕಾಗಿಯೆ, ಯಾರ ದಯೆಯಿಂದ ತನ್ನ ಬದುಕೋ ಆ ಸಮಾಜಕ್ಕಾಗಿಯೆ ಉಪಯೋಗಿಸಬೇಕು. ಈಗಿರುವ ವಿಷಮತೆಗೆ ಜನರ ಅಜ್ಞಾನವೇ ನಿಜವಾಗಿ ಕಾರಣ. ತಮ್ಮ ಸಹಜ ಬಲ ಅವರಿಗೆ ಗೊತ್ತಾದ ಹಾಗೆಲ್ಲ ಈ ಅಸಮಾನತೆ ಮಾಯವಾಗಲೇ ಬೇಕು. ಈ ಕ್ರಾಂತಿ ಹಿಂಸೆಯಿಂದ ನಡೆದರೆ ಪರಿಸ್ಥಿತಿ ತಲೆ ಕೆಳಗಾದೀತು, ಉತ್ತಮವಾಗಲಿಕ್ಕಿಲ್ಲ. ಅಹಿಂಸೆಯಿಂದ ಪರಾವರ್ತನದಿಂದ ಜನಕೋಟಿ ಬಯಸುವ ಹೊಸ ಯುಗ ಮೂಡೀತು. ನನ್ನ ದಾರಿ, ನನ್ನ

ಮೊರೆ, ಶುದ್ಧ ಅಕಳಂಕವಾದ ಅಹಿಂಸೆ. ಫ್ರೆಂಚರದೊಂದು ಚಲೋ ಸೂತ್ರವಿದೆ; ಸ್ವಾತಂತ್ರ್ಯತೆ, ಸಮಾನತೆ, ಸೋದರತೆ. ಅದು ಕೇವಲ ಫ್ರೆಂಚರಿಗೆ ಅಲ್ಲ, ಸರ್ವಮಾನವ ಲೋಕದ ಸೊತ್ತು.

ಫ್ರೆಂಚರಿಗೆ ಸಾಧ್ಯವಾಗದಿದ್ದುದನ್ನು ನಾವು ಮಾಡಬಾರದೇಕೆ? ನರೇಂದ್ರರು, ಶ್ರೀಮಂತ ಜಾಗೀರದಾರರು, ವ್ಯಾಪಾರಿಗಳು ಮುಂದಡಿಯಿಟ್ಟಾರೇನು? ದಾರಿ ತೋರಬೇಕಾದುದು ಅವರ ಕೆಲಸ. ದಿಕ್ಕಿಲ್ಲದ ದರಿದ್ರರೇನು ಮಾಡಿಯಾರು? ಯಾರಿಗೇನು ಹಂಚಬಲ್ಲರವರು? ಅವರಿಗೇನಿದೆ–ಗತಿ ವಿಹೀನತೆ, ದೀನದಾರಿದ್ರ್ಯವಲ್ಲದೆ. ಬ್ರಿಟಿಷ್ ಪ್ರಭುತ್ವಕ್ಕೆ ವಾರಂವಾರವೂ ಬಿನ್ನಹ ಮಾಡಿಕೊಳ್ಳುತ್ತಿದೇನೆ. ಈ ಬಿನ್ನಹದಲ್ಲಿರುವ ಸ್ನೇಹಭಾವನೆ ಆ ಬಿನ್ನಹಗಳಲ್ಲೂ ಇದೆ. ಬ್ರಿಟಿಷರು ಅದಕ್ಕೆ ಓಗೊಡಲಿಕ್ಕಿಲ್ಲ. ಬ್ರಿಟಿಷರ ಬಲಕ್ಕೆ ಆಧಾರಸ್ತಂಭಗಳಾದ 'ಭಾಗ್ಯವಂತ'ರು ತಮ್ಮ ಸ್ಪಷ್ಟವಾದ ಧರ್ಮವನ್ನು ಗುರುತಿಸಿಕೊಂಡರೆ ಬ್ರಿಟಿಷ್ ಪ್ರಭುತ್ವ ಮಣಿಯಲೇಬೇಕು. ಈ ಆಧಾರಸ್ತಂಭಗಳಿಂದ ಮಾರುತ್ತರ ಬರುವ ಆಸೆಯಿಲ್ಲದುದರಿಂದಲೆ, ಈ ಸ್ತಂಭಗಳಿಗೇ ಆಧಾರವಾದ ಜನರನ್ನು ಪ್ರೋತ್ಸಾಹಿಸುವ ಯೋಚನೆ ಮಾಡಿದೆ. ನಿಸ್ಸಂದೇಹವಾಗಿಯೂ ದೊಡ್ಡ ಗಂಡಾಂತರ ಬರಲಿದೆ. ಅದನ್ನು ತಪ್ಪಿಸಲು ನನ್ನ ಕೈಲಾದುದನ್ನೆಲ್ಲ ಮಾಡಬೇಕು; ಒಂದನ್ನೂ ಬಿಡಲಾರೆ. ಅಂತಲೇ ಈ ಬಿನ್ನಹ.

ಸೇವಾಗ್ರಾಮ
೨೭—೭—೪೨

ಮೋ. ಕ. ಗಾಂಧಿ

೨

ಸಂಸ್ಥಾನಗಳು ಕನಿಷ್ಠಪಕ್ಷವಾಗಿ ಏನೇನು ಭರವಸೆಕೊಟ್ಟರೆ–ಸಾರ್ವತ್ರಿಕವಾಗಿ-ಬ್ರಿಟಿಷ್ ಹಿಂದುಸ್ಥಾನದ ಮಹಾಜನಾಭಿಪ್ರಾಯಕ್ಕೆ ಸಮ್ಮತವಾದೀತು ಹೇಳಿ ಎಂದು ಸಂಸ್ಥಾನಗಳಲ್ಲಿ ಆಸಕ್ತಿಯುಳ್ಳ ಕೆಲವರು ನನ್ನ ಅಭಿಪ್ರಾಯ ಕೇಳಿದಾರೆ. ಈ ವಿಷಯದಲ್ಲಿ ಅಭಿಪ್ರಾಯ ಕೊಡಬೇಕಾಗಿ ಬಂದರೆ ಕಾಂಗ್ರೆಸ್ಸು ಏನು ಹೇಳೀತೋ ನಾನರಿಯೆ. ಕಾಂಗ್ರೆಸ್ಸು ಅಂಥ ಅಭಿಪ್ರಾಯ

ಕೊಡುವುದೂ, ಪಡುವುದೂ ತಪ್ಪಾದೀತು. ಪ್ರಜಾತಂತ್ರಜಾಲಿತ ಸಂಸ್ಥೆ ಸಂಗತಿಗಳು ನಡೆದಾಗ ತನ್ನ ಅಭಿಪ್ರಾಯ ಕೊಟ್ಟೀತು. ಅದೇನೆ ಇರಲಿ, ನನ್ನ ಅಭಿಪ್ರಾಯ ಕೇವಲ ವೈಯ್ಯಕ್ತಿಕ. ಯಾರೂ ಅದಕ್ಕೆ ಬದ್ಧರಲ್ಲ.

ಚಿಕ್ಕವು ದೊಡ್ಡವು ಎಲ್ಲಾ ಸಂಸ್ಥಾನಗಳೂ ಕೊಡಬೇಕಾದ ಕನಿಷ್ಠ ಮಾತ್ರ ಆಶ್ವಾಸನ ಇದು :

೧. ಸಂಪೂರ್ಣ ವ್ಯಕ್ತಿ ಸ್ವಾತಂತ್ರ್ಯ. ಪ್ರತ್ಯಕ್ಷವಾಗಿಯಾಗಲಿ ಅಪ್ರತ್ಯಕ್ಷವಾಗಿಯಾಗಲಿ ಹಿಂಸೆಯನ್ನು ಪ್ರೋತ್ಸಾಹಿಸಲು ಈ ಸ್ವಾತಂತ್ರ್ಯ ವನ್ನು ಬಳಸಕೂಡದು. ಇದರಲ್ಲಿ ಪತ್ರಿಕಾ ಸ್ವಾತಂತ್ರ್ಯ, ಹಿಂಸಾ ಪ್ರಚಾರ ಮಾಡದ ಪತ್ರಿಕಾಪಠನ ಸ್ವಾತಂತ್ರ್ಯಗಳೂ ಸೇರಿವೆ.

೨. ಸಂಸ್ಥಾನದ ಪ್ರಜೆಗಳಿಗೆ ಸಂಘ ಸ್ವಾತಂತ್ರ್ಯ. ಅವರು ತಮಗೆ ಬೇಕಾದ ಸಂಘಗಳನ್ನು ಕಟ್ಟಿ, ಪ್ರಜಾಭಿಪ್ರಾಯವನ್ನು ರೂಪುಗೊಳಿಸಿ ತಮ್ಮ ಸಂಸ್ಥಾನದಲ್ಲಿ ಹೊಣೆಗಾರ ಸರಕಾರದ ಸ್ಥಾಪನೆಗೆ ಕೃಷಿಮಾಡಲು ಅವಕಾಶ ವಿರಬೇಕು.

೩. ಸಂಸ್ಥಾನದ ಹೊರಗಿನ ಭಾರತೀಯರು ನಿರಾತಂಕವಾಗಿ ಸಂಸ್ಥಾನ ಗಳಲ್ಲಿ ಪ್ರವೇಶಿಸುವಂತಿರಬೇಕು. ಆ ಸಂಸ್ಥಾನಗಳನ್ನು ನಾಶಮಾಡುವ ಕಾರ್ಯ-ಕಲಾಪದಲ್ಲಿ ಅವರು ತೊಡಗಿರಬಾರದು,

೪. ೧೦--೧೫ ಲಕ್ಷ ವರಮಾನವುಳ್ಳ ಸಂಸ್ಥಾನಕ್ಕೆ ಅರಮನೆ ವೆಚ್ಚ ನೂರಕ್ಕೆ ಹತ್ತಕ್ಕಿಂತ ಹೆಚ್ಚು ಆಗದಂತೆ ಕ್ಲುಪ್ತವಾಗಬೇಕು. ಹೆಚ್ಚು ವರ ಮಾನವುಳ್ಳ ಸಂಸ್ಥಾನವೇ ಆದರೂ ೩ ಲಕ್ಷಕ್ಕೆ ಮೀರಲೇಬಾರದು. ಇದರಲ್ಲಿ ಅರಮನೆ ವೆಚ್ಚ, ಮೋಟಾರು, ಲಾಯ, ಅತಿಥಿಗಳು ಎಲ್ಲವೂ ಆಗಬೇಕು. ಸಾರ್ವಜನಿಕ ಕಾರ್ಯಕ್ಕಾಗಿ ದೊರೆಗಳು ಮಾಡುವ ವೆಚ್ಚವನ್ನು—ಅವು ಸ್ಪಷ್ಟ ವಾಗಿ ನಿರ್ಧರಿತವಾಗಬೇಕು—ಬೇರೆ ಕೊಡಬಹುದು.

೫. ನ್ಯಾಯಾಂಗವು ಸ್ವತಂತ್ರವೂ ಸ್ಥಿರವೂ ಆಗಿರಬೇಕು. ಅವರಿಗೆ ಯಾವ ಬಗೆಯ ಕಿರುಕುಳವೂ ಇರಕೂಡದು. ತೀಕ್ಷ್ಣ ನಿಷ್ಪಕ್ಷಪಾತ, ಸಂಪ್ರದಾಯಪರಂಪರೆ, ಏಕವಾಕ್ಯ ಇವುಗಳನ್ನು ನಿರ್ವಹಿಸಲು ಆ ಸಂಸ್ಥಾನ

ಯಾವ ಪ್ರಾಂತದಲ್ಲಿದೆಯೋ ಆ ಪ್ರಾಂತದ ಶ್ರೇಷ್ಠ ನ್ಯಾಯಾಲಯದ ಪುನರ್ವಿಚಾರಣೆಗೆ ಒಳಗಾಗಬೇಕು ಶ್ರೇಷ್ಠ ನ್ಯಾಯಾಲಯಗಳ ಶಾಸನವನ್ನು ಬದಲಿಸಬೇಕಾದೀತು. ಸಂಸ್ಥಾನಗಳು ಒಪ್ಪಿದರೆ, ಅದು ಸುಲಭ.

ರಾಜಕೀಯ ಸುಧಾರಣೆಗಳ ಮಾತನ್ನು ನಾನು ಬೇಕೆಂದೇ ಬಿಟ್ಟಿದೇನೆ. ಆಯಾ ಸಂಸ್ಥಾನದ ಪರಿಸ್ಥಿತಿಯನ್ನು ಅವಲಂಬಿಸಿದೆ ಇದು. ಎಲ್ಲಿ ಸ್ಥಳದ ಜನ ದೃಢವಾಗಿ ಬಯಸುತ್ತಾರೋ ಅಲ್ಲಿ ಆ ದೊರೆ ಸುಧಾರಣೆ ಮಾಡಲೇ ಬೇಕಾದೀತು ಎಂದುಕೊಳ್ಳುತ್ತೇನೆ.

ಈ ಕನಿಷ್ಠ ಸೂತ್ರಗಳಲ್ಲಿ ಶ್ರೇಷ್ಠ ನ್ಯಾಯಾಲಯದ ಪುನರ್ವಿಮರ್ಶೆಯ ಮಾತೇ ಬಹಳ ವಿವಾದಾಸ್ಪದವಾದ್ದು. ಆದರೆ ಇಂಥ ಏರ್ಪಾಡು ಯಾವುದನ್ನಾದರೂ ಮಾಡದೆ, ಯಾರು ಏನೇ ಹೇಳಲಿ, ಸಂಸ್ಥಾನಗಳಲ್ಲಿ ಶುದ್ಧ ನ್ಯಾಯ ಸಿಗದು. ಬ್ರಿಟಿಷರು ಸಾವಧಾನದಿಂದ ಬೆಳೆಸಿದ ಸಂಸ್ಥೆ ಇದೊಂದು. ಶ್ರೇಷ್ಠ ನ್ಯಾಯಾಲಯದ ವಿಚಾರಣೆ ಬಲು ನಿಧಾನ, ಬಲು ತುಟ್ಟಿ. ಬಡವರಿಗೆ ಅದು ನಿಲುಕದು. ಅವರ ಕಾರ್ಯಕ್ರಮ ಪರಂಪರೆ ಬೇಸರಗೊಳಿಸುತ್ತದೆ. ಎಷ್ಟೋ ಸಲ ಅಪ್ರಮಾಣಿಕರೇ ಗೆಲ್ಲುತ್ತಾರೆ. ಇಷ್ಟೆಲ್ಲ ದೋಷವಿದ್ದರೂ ರಾಜಕೀಯೇತರದಲ್ಲಿ ಶ್ರೇಷ್ಠ ನ್ಯಾಯಾಲಯದ ತೀರ್ಮಾನಗಳು ನ್ಯಾಯವೂ ನಿರ್ಭೀತವೂ ಆಗಿದೆ. ಸಂಸ್ಥಾನಗಳ ನ್ಯಾಯಾಂಗದ ವಿಚಿತ್ರತೆಗೆ, ಕಾರ್ಯಾಂಗದಾಸ್ಯಕ್ಕೆ ಇದಕ್ಕಿಂತ ಬೇರೆ ಸುಲಭವೂ ಸಿದ್ಧವೂ ಆದ ನಿಗ್ರಹಸಾಧನ ನನಗೆ ಕಂಡಿಲ್ಲ. ಇದೇ ಬೇಕೆಂದು ನನ್ನ ಹಟವಲ್ಲ. ಇದರಷ್ಟೇ ಪರಿಣಾಮಕಾರಿಯಾದ್ದು ಮತ್ತೊಂದು ಸಿಕ್ಕರೆ ನನಗೇನು ಅಭ್ಯಂತರವಿಲ್ಲ.

ಒಂದು ವಿಷಯ ಸ್ಪಷ್ಟವಾಗಿ ಕಾಣುತ್ತಿದೆ. ರಾಜರಿಂದ ಪ್ರಜೆಗೆ ಅಧಿಕಾರ ಹಿಂಸಾರಹಿತವಾಗಿ ಬರಬೇಕಾದರೆ, ದೊರೆಗಳು ದೊರೆಗಳಾಗಿ ಉಳಿಯಬೇಕಾದರೆ, ಅವರು ಕಾಲಾನುಗುಣವಾಗಿ ಬದಲಾಗಬೇಕು. ದೊರೆಗಳು ತಾವಾಗಿಯೇ ಅಧಿಕಾರ ತ್ಯಾಗಮಾಡಿ ಧರ್ಮಪಾಲಕರಾಗಿ ಉಳಿಯುವ ನನ್ನ ಯೋಜನೆಯಲ್ಲಿ ನಂಬಿಗೆಯುಳ್ಳವರು ಬಹಳ ಕಡಿಮೆ. ಇದು ಅವ್ಯವಹಾರಿಕ, ಮಾನವ ಸ್ವಭಾವಕ್ಕೆ ಅನನುಗುಣ ಎನ್ನುತ್ತಾರೆ ಟೀಕೆಗಾರರು. ಆದರೆ ನನಗೆ ಇದು ವ್ಯವಹಾರ್ಯವೆನಿಸುವವರೆಗೆ ಇದನ್ನು ಹೇಳಲೇ ಬೇಕಷ್ಟೆ.

ಲೋಕ ಆತ್ಮವಿನಾಶವಾದರೂ ಮಾಡಿಕೊಳ್ಳಬೇಕು, ಇಲ್ಲವೆ ನೈತಿಕ ಸಾಮಾಜಿಕ ಆರ್ಥಿಕ ರಾಜಕೀಯ ಎಲ್ಲ ಬಾಧೆಗಳನ್ನೂ ಅಹಿಂಸೆಯಿಂದ ಪರಿಹರಿಸಿಕೊಳ್ಳಬೇಕು; ಈ ಎರಡರಲ್ಲಿ ಒಂದು ಅನಿವಾರ್ಯ. ಈ ಯುದ್ಧದಲ್ಲಿ ಲೋಕ ಅಳಿದುಳಿದರೆ, ಆಗ ಪರಿಹಾರೋಪಾಯದ ದಾರಿಯ ಬಳಿ ಬಂದೇವು. ಬರಲಿರುವ ಪ್ರಳಯಕ್ಕೆ ಅಹಿಂಸೆಯೇ ಏಕೈಕ ಸಾಧನ ಎಂಬುದನ್ನು ಅರಿತವರು ತಮ್ಮ ತಮ್ಮ ಜಾತೀಯ ಮತೀಯ ಸಾಂಸಾರಿಕ ಸಮಸ್ಯೆಗಳಿಗೆ ಅದನ್ನು ಚಿಕಿತ್ಸೆಯಾಗಿ ಬಳಸಬೇಕು. ಅಹಿಂಸೆ ಸರ್ವಕಾಲ ಸರ್ವದೇಶ ಸಂಗತವಾದ ಸಾರ್ವತ್ರಿಕ ಸತ್ಯಶಾಸನ. ಅದರ ನಿತ್ಯ ನಿಯಮಕ್ಕೆ ಚ್ಯುತಿಯೇ ಇಲ್ಲ. ಅದನ್ನು ಅಸಡ್ಡೆ ಮಾಡಿದರೆ ಇಂದಲ್ಲ ನಾಳೆ ವಿನಾಶವಂತೂ ಸಿದ್ಧ.

ದೇಶದಲ್ಲಿ ಕಾಂಗ್ರೆಸ್ಸಿಗಿರುವ ಶಕ್ತಿ ಪ್ರಭಾವಗಳನ್ನು ಕ್ಷುದ್ರವಾಗಿ ಎಣಿಸಬೇಡಿ ಎಂದು ರಾಜರನ್ನು ಬೇಡುತ್ತೇನೆ. ಇನ್ನೂ ಕಾಂಗ್ರೆಸ್ಸಿನ ನೀತಿ ಅಹಿಂಸೆಯೇ. ಆಗಲೇ ಹಿಂಸೆಯ ಗಾಳಿ ಬಲವಾಗಿ ಬೀಸುತ್ತಿದೆ. ನಾನೂ ನನ್ನ ಜೊತೆಗಾರರು ಕೆಲವರೂ ಅಹಿಂಸೆಯ ಪರವಾಗಿ ಸರ್ವಪ್ರಯತ್ನವನ್ನೂ ಮಾಡುತ್ತಿದೇವೆ. ತಮಗಾಗಿ, ತಾವು ಜನ್ಮವೆತ್ತಿದ ದೇಶಕ್ಕಾಗಿ ಅಹಿಂಸೆಯ ಪರವಾಗಿ ನಿಲ್ಲಿ ಎಂದು ನರೇಂದ್ರರನ್ನು ಪ್ರಾರ್ಥಿಸುತ್ತೇನೆ. ಕಾಂಗ್ರೆಸ್ಸು ಹೆಚ್ಚು ಹೆಚ್ಚು ಅಹಿಂಸಾಪಂಥಿಯಾದರೂ ಆದೀತು, ಇಲ್ಲವೆ ಈಗಲೇ ಹಿಂಸಾಕೃತಿಗೆ ಕೈಯಿಕ್ಕದಿದ್ದರೂ ಮುಂದಿನ ಹಿಂಸಾ ಕಾರ್ಯಕ್ಕೆ ಸಿದ್ಧವಾಗುತ್ತ ಹಿಂಸಾಪಂಥಿಯಾದೀತು. ಏನೇ ಆಗಲಿ, ಹೇಡಿಗಳಿಗೆ ಮಾತ್ರ ಆಸ್ಪದಕೊಡದು. ಕೊಟ್ಟರೆ, ಈಗ ಅದಕ್ಕಿರುವ ಪ್ರಭಾವ ಬಲ ಅಳಿದೀತು. ಮೇಲಿನವನಾಗಲಿ ಕೆಳಗಿನವನಾಗಲಿ ಕಾಂಗ್ರೆಸ್ಸಿಗೆ ಮೇಲು ಕೀಳು ಇಲ್ಲ. ಭಾರತೀಯ ಪ್ರತಿಯೊಬ್ಬನೂ ತನಗೆ ಒಪ್ಪಿದ್ದನ್ನು ಆರಿಸಿಕೊಳ್ಳಬೇಕು.

೮ - ೭ - ೩೯

---

# ಲಿನ್‌ಲಿಥಗೋಗೆ

[ ೧೯೪೦ ರಲ್ಲಿ ವೈಯಕ್ತಿಕ ಸತ್ಯಾಗ್ರಹ ನಡೆಯಿತಲ್ಲ—ಯುದ್ಧ ವಿರೋಧ ಪ್ರಚಾರಕ್ಕಾಗಿ. ವಿನೋಬಾಜೀ ಪ್ರಥಮ ಸತ್ಯಾಗ್ರಹಿ, ಆ ಮೇಲೆ ಜವಾಹರ್. ಆಗ ಗಾಂಧೀಜಿ ಬೇಡಿದ್ದು ಬರೀ ವಾಕ್‌ಸ್ವಾತಂತ್ರ್ಯ. ಕಾಂಗ್ರೆಸ್ಸು ಗಾಂಧೀಜಿಗೆ ಮತ್ತೆ ನಾಯಕ ಪಟ್ಟ ಕಟ್ಟಿ ಈ ಸತ್ಯಾಗ್ರಹಕ್ಕೆ ಅಣಿಯಾಯಿತು. ಆಗ ವೈಸರಾಯ್, ಗಾಂಧೀಜಿಯನ್ನು ಸಿಮ್ಲಾಕ್ಕೆ ಕರೆಸಿ ೩ ದಿನ ದೀರ್ಘ ಸಂಭಾಷಣೆ ಮಾಡಿದರು. ಆ ಮೇಲೆ ಅದರ ಸಾರಾಂಶವನ್ನು ಬರೆದು ಕಳಿಸಿದರು. ಅದಕ್ಕೆ ಇದು ಉತ್ತರ. ]

ಪ್ರಿಯ ಶ್ರೀಮಂತ ಲಿನ್‌ಲಿಥಗೋಗೆ,

ನಿಮ್ಮ ಪತ್ರ. ನಿಮ್ಮೆದುರು ನಾನು ಹೇಳಿದ ರೀತಿ, ಕಾಂಗ್ರೆಸ್ಸಿನ ಮಥಿತವನ್ನು ತಕ್ಕಮಟ್ಟಿಗೆ ಸರಿಯಾಗಿಯೇ ವರ್ಣಿಸಿದೀರಿ. ಕಾಂಗ್ರೆಸ್ಸಿನ ಅಭಿಪ್ರಾಯವನ್ನು ಸರಕಾರ ಗ್ರಹಿಸಲಿಲ್ಲವಲ್ಲ ಎಂದು ನನಗೆ ಬಹಳ ದುಃಖವಾಗುತ್ತಿದೆ. ಈ ಯುದ್ಧಕ್ಕೆ ನಮ್ಮನ್ನು ಕರೆದಿಲ್ಲ, ಕೇಳಿಲ್ಲ: ನಮ್ಮ ಮಟ್ಟಿಗೆ ಇದು ಹಿಂದುಸ್ಥಾನವನ್ನು ಕಾಲಕೆಳಗೆ ತುಳಿದಿರುವ ಬ್ರಿಟಿಷ್ ಸಾಮ್ರಾಜ್ಯ ಸಂರಕ್ಷಣೆಗಾಗಿ ನಡೆಸಿದ ಯುದ್ಧ ಎಂದು ನಮಗೆಲ್ಲರಿಗೂ, ಕಾಂಗ್ರೆಸ್ಸಿನವರಿಗೂ ಇತರರಿಗೂ ಅನಿಸಿದೆ; ಇಂಥ ಜನರ ಮನಸ್ಸನ್ನು ಸಮಾಧಾನಪಡಿಸುವಷ್ಟಕಾದರೂ ಇಷ್ಟು ಮಾತ್ರ ಅಗತ್ಯ—ಎಂಬುದನ್ನು ನೀವು ಗ್ರಹಿಸಲಿಲ್ಲ. ನಾನು ಹೇಗೆ ಯುದ್ಧ ವಿರೋಧಿಯೋ ಅವರೂ ಹಾಗೇ ಯುದ್ಧ ವಿರೋಧಿಗಳು. ಅವರದೂ ಅಷ್ಟೇ ತಾತ್ವಿಕ ವಿರೋಧ. ಅವರಿಗಿಂತ ನನಗೆ ಹೆಚ್ಚು ಆತ್ಮಸ್ವಾತಂತ್ರ್ಯ ಬೇಕು ಎನ್ನಲಾರೆ ನಾನು.

ನಮ್ಮ ಮಾತುಕತೆಯಲ್ಲಿ ನಾನಾಗಲೇ ತಿಳಿಸಿದೇನೆ. ನಾಜೀವಿಜಯಕ್ಕೆ, ಬ್ರಿಟಿಷರು ಎಷ್ಟು ಮಟ್ಟಿಗೆ ವಿರೋಧಿಗಳೋ ಕಾಂಗ್ರೆಸ್ಸೂ ಅಷ್ಟೇ ಮಟ್ಟಿಗೆ ವಿರೋಧಿ. ಯುದ್ಧದಲ್ಲಿ ಪಾಲುಗೊಂಡು ಆ ವಿರೋಧವನ್ನು ತೋರಿಸಿ,

ಎಂದರೆ ಆಗದು; ಆ ವಿರೋಧ ಅಷ್ಟು ದೂರ ನಮ್ಮನ್ನು ಒಯ್ಯದು. ಸಾಲದ್ದಕ್ಕೆ ನೀವೂ ಭಾರತ ಕಾರ್ಯದರ್ಶಿಯೂ ಹಿಂದುಸ್ಥಾನ ಆತ್ಮಸಂತೋಷ ದಿಂದ ಯುದ್ಧ ಪ್ರಯತ್ನದಲ್ಲಿ ನೆರವಾಗುತ್ತಿದೆಯೆಂದು ಹೇಳಿಬಿಟ್ಟದ್ದೀರಿ; ಆದ್ದರಿಂದ ಹಿಂದುಸ್ಥಾನದ ವಿಶಾಲಜನಸ್ತೋಮಕ್ಕೆ ಅದರಲ್ಲಿ ಎಳ್ಳಷ್ಟು ಆಸಕ್ತಿಯಿಲ್ಲ ಎಂಬುದನ್ನು ಸ್ಪಷ್ಟವಾಗಿ ತೋರಿಸಬೇಕಾದ ಅಗತ್ಯವಿದೆ. ಈ ಜನಕ್ಕೆ ನಾಜೀಪಂಥಕ್ಕೂ ಹಿಂದುಸ್ಥಾನವನ್ನು ಆಳುವ ದ್ವಿಗುಣ ನಿರಂಕುಶ ತೆಗೂ ಭೇದ ಕಾಣದು. ಹಿಂದುಸ್ಥಾನದ ವಿಶಿಷ್ಟ ಪರಿಸ್ಥಿತಿಯಲ್ಲಿ ಅದಕ್ಕೆ ಅಗತ್ಯವಾದ ಸ್ವಾತಂತ್ರ್ಯವನ್ನು ಸರಕಾರ ಕೊಟ್ಟಿದ್ದರೆ, ಆಗ ಹಿಂದುಸ್ಥಾನದಿಂದ ಸ್ವಯಂಪ್ರೇರಿತ ಸಹಾಯ ಒದಗಿತೆಂದು ಹೇಳಿಕೊಳ್ಳುತ್ತಿರುವ ಮಾತು ನಿಜವಾಗುತ್ತಿತ್ತು. ಯುದ್ಧವಾದಿಗಳು ಯುದ್ಧ ವಿರೋಧಿಗಳು, ಅಹಿಂಸಾ ಯುತರಾಗಿದ್ದರೆ, ಸರಿಸಮನಾಗಿ ಇರಬಹುದಾಗಿತ್ತು ಆಗ.

ನಿಮ್ಮ ಪತ್ರದ ಕೊನೆಯಲ್ಲಿರುವ ಮಾತನ್ನು ವಿವರಿಸುತ್ತೇನೆ. ಸರಕಾರಕ್ಕೆ ಉಸಿರುಕಟ್ಟುವಂಥದನ್ನೇನೂ ಮಾಡುವುದಿಲ್ಲವೆಂದರೆ, ಆತ್ಮವಿನಾಶ ಮಾಡಿ ಕೊಂಡು ಹಿಂದುಸ್ಥಾನ ಶಾಂತ್ಯನ್ವೇಷಕ ರಾಷ್ಟ್ರವಾಗಿಸಿ, ಅದು ಯುದ್ಧಕ್ಕೆ ಸೇರುವುದು ಯಾರಿಗೂ, ಬ್ರಿಟನ್ನಿಗೂ ಸಹ, ಹಿತಕರವಲ್ಲ ಎಂಬುದನ್ನು ತೋರಿಸಲು ಮಾಡಬೇಕಾದ ಸಮಸ್ತ ರಾಷ್ಟ್ರೀಯ ಕಾರ್ಯವನ್ನೂ ನಿಲ್ಲಿಸಿ ಬಿಡುವುದು ಎಂತಲೆ ? ಎಂದಿಗೂ ಇಲ್ಲ. ಹಿಂದುಸ್ಥಾನಕ್ಕೆ ವಾಕ್‌ಸ್ವಾತಂತ್ರ್ಯ ವನ್ನು ಕೊಟ್ಟು ತನಗೆ ಬೇಕಾದ್ದನ್ನು ಆರಿಸಲು ಬಿಟ್ಟಿದ್ದರೆ, ಆಗ ಹಿಂದು ಸ್ಥಾನ ಬ್ರಿಟನ್ನಿನ ಕಡೆಯೇ ಒಲಿಯುತ್ತಿತ್ತು. ಆಗ ನಿಜವಾದ ಸ್ವಾತಂತ್ರ್ಯ ಬಂದು, ಅದರಿಂದ ಬ್ರಿಟನ್ನಿನ ಕೀರ್ತಿ ಹೆಚ್ಚಿ, ಅದಕ್ಕೆ ಲಾಭವಾಗುತ್ತಿತ್ತು.

ಆದ್ದರಿಂದ ಈಗಲೂ ಹೇಳುತ್ತೇನೆ: ಬ್ರಿಟಿಷರ ಸರಕಾರದ ಯುದ್ಧ ಪ್ರಯತ್ನವನ್ನು ಸ್ತಂಭಿಸುವ ದಾರಿ ತುಳಿಯಲು ಕಾಂಗ್ರೆಸ್ಸಿಗೆ ಇಷ್ಟವಿಲ್ಲ. ಆದರೆ ಮಾನವಲೋಕದ ಈ ಸೂಕ್ಷ್ಮಪ್ರಸಂಗದಲ್ಲಿ ತನ್ನ ಧರ್ಮವನ್ನು ಕೈ ಬಿಟ್ಟು ತನ್ನ ನೀತಿಯನ್ನು ಮಣ್ಣುಪಾಲು ಮಾಡಲು ಕಾಂಗ್ರೆಸ್ಸಿಗೆ ಸಾಧ್ಯವೆ ? ಕಾಂಗ್ರೆಸ್ಸು ಸಾಯಬೇಕಾಗಿದ್ದರೆ ತನ್ನ ಧರ್ಮವನ್ನು ಘೋಷಿಸುತ್ತಾ ಸಾಯಲಿ; ಆ ಕಾರ್ಯದಲ್ಲೆ ಮಡಿಯಲಿ ವಾಕ್‌ಸ್ವಾತಂತ್ರ್ಯದ ಒಂದೇ ಒಂದು ಅಂಶ

ದಲ್ಲೂ ನಾವು ಏಕಾಭಿಪ್ರಾಯಕ್ಕೆ ಬಾರದಿರುವುದು ನಿಜವಾಗಿ ದುರದೃಷ್ಟ. ಆದರೂ ಕಾಂಗ್ರೆಸ್ಸಿನ ನಿಲುವನ್ನು ತಿಳಿದುಕೊಂಡು ಸರಕಾರ ತಮ್ಮ ನೀತಿ ಯನ್ನು ಅಳವಡಿಸಿಕೊಂಡಾರೆಂದು ಆಸೆಯಿಟ್ಟುಕೊಂಡಿದೇನೆ.

ನಮ್ಮ ಮಾತುಕತೆಯಲ್ಲಿ ನಾನು ಆಡಿದ ಉಳಿದ ಅಂಶಗಳನ್ನು ವಿವರಿಸ ಬೇಕೆಂದರೆ ಪತ್ರ ದೊಡ್ಡದಾಗುವ ಭೀತಿ. ಆದಷ್ಟು ಬೇಗ ಒಂದು ಹೇಳಿಕೆ ಕೊಡುವ ಯೋಚನೆಯಿದೆ.

ಕೊನೆಯದಾಗಿ, ನನ್ನ ಸುದೀರ್ಘ ಭಾಷಣವನ್ನೂ ವಾದವನ್ನೂ ನೀವು ಸಹನೆ ಶಾಂತಿಗಳಿಂದ ಕೇಳಿದ್ದಕ್ಕಾಗಿ ಬಹಿರಂಗವಾಗಿ ವಂದಿಸುತ್ತೇನೆ. ಪ್ರಕೃತಕ್ಕೆ ನಮ್ಮ ದಾರಿಬೇರೆ ಬೇರೆಯಾಗಿ ಕಂಡರೂ ನಮ್ಮ ವೈಯ್ಯಕ್ತಿಕ ಸ್ನೇಹ, ನಾನು ಹೊರಟುಬರುವಾಗ ನೀವು ಹೇಳಿದಂತೆ, ಆ ವಿರೋಧದ ಭಾರವನ್ನು ತಡೆದು ಕೊಂಡೀತು ಎಂದು ಭಾವಿಸಿದೇನೆ.

ಸಿಮ್ಲಾ
೩೦—೯—೪೦ ಮೋ. ಕ. ಗಾಂಧಿ

———

# ಓದುಗರಿಗೆ

ಪೂನಾದ ಜಿಲ್ಲಾಧಿಕಾರಿಯಿಂದ 'ಹರಿಜನ'ದ ವ್ಯವಸ್ಥಾಪಕರಿಗೆ ಈ 'ಎಚ್ಚರಿಕೆ' ಬಂದಿದೆ :

' ವಿನೋಬಾ ಭಾವೆಯವರ ಸತ್ಯಾಗ್ರಹದ ಪೂರ್ವಾಪರ ವಿವರಗಳಾಗಲಿ ಅವರ ಭಾಷಣಗಳಾಗಲಿ ದಿಲ್ಲಿಯಲ್ಲಿರುವ ಪತ್ರಿಕಾ ಸಲಹೆಗಾರರಿಗೆ ತೋರಿಸದೆ ಪ್ರಕಟವಾಗಕೂಡದು ಎಂದು ನಿಮಗೆ ತಿಳಿಸಲು ಸರಕಾರ ನನಗೆ ಹೇಳಿದೆ. ನಿಮ್ಮ ಹಿತಕ್ಕಾಗಿ ಇದನ್ನು ತಿಳಿಸಿದೇನೆ. ಇಲ್ಲವಾದರೆ ಭಾರತ ಸಂರಕ್ಷಣಾ ನಿಯಮ ೩೮ ರ ಪ್ರಕಾರ ಶಿಕ್ಷೆ ಕಾದಿದೆ. '

ಇದನ್ನು ನೋಡಿ ನಾನು ವೈಸರಾಯಗೆ ಪತ್ರ ಬರೆದೆ. ಪತ್ರವ್ಯವಹಾರ ಇನ್ನೂ ನಡೆದದೆ. ಆದರೆ ಇವೊತ್ತು ನಾನೊಂದು ತೀರ್ಮಾನ ಮಾಡಬೇಕು. ಇಲ್ಲವಾದರೆ ಸಾರ್ವಜನಿಕ ಧನ ವ್ಯರ್ಥವಾದೀತು. ಇದು ವರೆಗೆ ಬಂದಿರುವ ಉತ್ತರಗಳ ಪ್ರಕಾರ ಹರಿಜನ, ಹರಿಜನಬಂಧು, ಹರಿಜನ ಸೇವಕ ಮೂರೂ ಪತ್ರಿಕೆಗಳನ್ನು ನಿಲ್ಲಿಸದೆ ಬೇರೆ ದಾರಿಯಿಲ್ಲ. ಸತ್ಯಾಗ್ರಹದ ಬಗ್ಗೆ ನಾ ಬರೆದ ಪ್ರತಿಯೊಂದು ಸಾಲನ್ನೂ ದಿಲ್ಲಿಗೆ ಕಳಿಸಬೇಕೆಂದರೆ ನಾನು ಸ್ವತಂತ್ರವಾಗಿ ಕೆಲಸ ಮಾಡಲಾರೆ. ಈ ಸೂಚನೆ ಕೇವಲ ಸೂಚನೆ; ಅದರಂತೆ ನಡೆಯ ಬೇಕಾಗಿಲ್ಲವೆಂಬುದು ಸರಿ. ಆದರೆ ಈ ಸೂಚನೆಯ ತಾತ್ಸಾರಕ್ಕೆ ಏನು ಶಿಕ್ಷೆ ಎಂಬುದನ್ನು ಅದರಲ್ಲೆ ತಿಳಿಸಿದಾರೆ. ಸಂಪಾದಕರ ವಿರುದ್ಧ ಶಾಸನ ಕಾರ್ಯ ಕ್ರಮ ನಡೆಯುವುದು ನನಗೆ ಇಷ್ಟವಿಲ್ಲ. ಈ ಮೂರು ಪತ್ರಿಕೆ ಸತ್ಯದ ಸೇವೆಗಾಗಿ ಪ್ರಕಟವಾಗುತ್ತಿವೆ. ಅದರಿಂದ ಎಲ್ಲ ಪಕ್ಷಕ್ಕೂ ಹಿತವಿದೆ. ಶಿಕ್ಷೆಯ ಭಯವನ್ನು ಇಟ್ಟುಕೊಂಡು ಪತ್ರಿಕೆ ನಡೆಸುವುದಾದರೆ ನಾನು ಆ ಹಿತವನ್ನು ಸಾಧಿಸಲಾರೆ. ಸವಿನಯ ಶಾಸನೋಲ್ಲಂಘನ ಸರಿಯಿರಲಿ ತಪ್ಪಿರಲಿ, ಪತ್ರಿಕಾ ಸ್ವಾತಂತ್ರ್ಯವೇ ಒಂದು ವಿಶೇಷ ಹಕ್ಕು. ಶ್ರೀ ವಿನೋಬಾ ಭಾವೆಯನ್ನು ವಿಚಾರಣೆಗೆ ಗುರಿಮಾಡಿ ಸರಕಾರ ತನ್ನ ಇಂಗಿತವನ್ನು ಸ್ಪಷ್ಟಗೊಳಿಸಿದೆ.

ಆ ವಿಷಯದಲ್ಲಿ ನನ್ನ ದೂರು ಏನೂ ಇಲ್ಲ. ಭಾರತ ಸಂರಕ್ಷಣಾ ಶಾಸನದ ಅಪರಿಹಾರ್ಯ ಫಲ ಅದು. ಆದರೆ ಪತ್ರಿಕಾ ಸ್ವಾತಂತ್ರ್ಯದ ಮಾತು ಬೇರೆ; ಅದರ ಸ್ಥಾನಮಾನವೇ ಬೇರೆ. ಬರೀ ಸೂಚನೆಯಂತೆ ತೋರಿಬಂದರೂ ಉಲ್ಲಂಘಿಸಿದರೆ ಪ್ರತ್ಯೇಕ ಫಲವನ್ನು ವಿಧಿಸುವ ಈ ಅಪ್ಪಣೆಯನ್ನು ನಾನು ಸ್ವೀಕರಿಸಲಾರದಾಗಿದೇನೆ.

ಈ ಮೂರೂ ವಾರಪತ್ರಿಕೆಗಳ ಓದುಗರಿಗೆ ಆಶಾಭಂಗವಾತ್ತದೆ. ಈ ವಿರಾಮ ತಾತ್ಕಾಲಿಕವೋ ಅನಿಯಮಿತ ಕಾಲದವರೆಗೋ ಎಂಬುದನ್ನು ಮುಂದಿನವಾರ ತಿಳಿಸುತ್ತೇನೆ. ಇದು ತಾತ್ಕಾಲಿಕವಾದೀತು, ನನ್ನ ಭಯವೆಲ್ಲ ನಿರಾಧಾರವಾದೀತು ಎಂದು ಈಗಲೂ ನಿರೀಕ್ಷಿಸುತ್ತಿದೇನೆ. ಹಾಗಾಗದೆ ಹೋದ ಪಕ್ಷದಲ್ಲಿ, ಸತ್ಯಾಗ್ರಹ ಪತ್ರಿಕಾ ಪ್ರಕಟನೆಯನ್ನವಲಂಬಿಸಿ ಬದುಕು ವಂಥದಲ್ಲ, ಸ್ವತಂತ್ರಜೀವಿ ಎಂದು ತಿಳಿಸಬಯಸುತ್ತೇನೆ. ಸತ್ಯಾಗ್ರಹ ಶುದ್ಧವಾಗಿದ್ದರೆ ತನ್ನ ಗರ್ಭದಲ್ಲೇ ತನ್ನ ಗತಿ-ಚಾಲನಗಳನ್ನು ಪಡೆದಿರುತ್ತದೆ. ಪ್ರಕೃತದ ಸತ್ಯಾಗ್ರಹ ಬಹಳ ಸತ್ಯವಾದುದೆಂದು ನನಗೆ ನಂಬಿಗೆಯಿದೆ. ಅದು ಧಾರೆಯಾಗಿ ಹರಿದೀತು. ಅವಸರದಲ್ಲಿ ಏನಾದರೂ ಮಾಡುವಂತೆ ಉದ್ರಿಕ್ತನಾಗಲಾರೆ ನಾನು. ಮುಂದಿನ ಹೆಜ್ಜೆಯೇನೋ ನಾನಿನ್ನೂ ತೀರ್ಮಾನಿಸಿಲ್ಲ. ಆದರೆ ಹಿಂದೆಯೆ ನಾನು ಹೇಳಿದಂತೆ ಶಾಸನೋಲ್ಲಂಘನದ ಕೃತಿ ಪ್ರತಿಯೊಂದೂ ಸ್ವಸಂಪೂರ್ಣ. ಈ ಹೇಳಿಕೆಯೇ ಸಾಕು ಅದು ಎಷ್ಟು ಪರಿಣಾಮಕಾರಿಯೋ ತೋರಿಸಲಿಕ್ಕೆ. ದಮನದ ದುಷ್ಟಕಾರ್ಯ ಒಂದೊಂದೂ ಸತ್ಯಕ್ಕೆ ಶಕ್ತಿದಾಯಕ. ದಮನದಿಂದಲೇ ಸತ್ಯಾಗ್ರಹ ಬಲಗೊಂಬುದು. ದಮನ ಮಾಡಿ ಮಾಡಿ ಕಟ್ಟಕಡೆಗೆ ದುಷ್ಟನೇ ದಣಿದಾನು. ಆಗ ಸತ್ಯಾಗ್ರಹದ ಉದ್ದೇಶ ಸಫಲವಾದೀತು. ಅಂತೇ ಮುಂದಿನ ಹೆಜ್ಜೆಯನ್ನು ನಾನು ಇಟ್ಟೇನೋ ಇಲ್ಲವೋ, ಯಾವಾಗ ಇಟ್ಟೇನೋ, ಮಹಾಜನರಿಗೆ ಅದು ಮುಖ್ಯವಲ್ಲ. ಯಾರಿಗೆ ಸಹಾನುಭೂತಿಯಿದೆಯೋ ಅವರು ನಾನು ಹೇಳಿದ ಸೂಚನೆಗಳಂತೆ ನಡೆಯಲಿ. ನನಗೆ ನಂಬಿಗೆಯಿದೆ, ನನ್ನ ನಂಬಿಗೆಯನ್ನು ಪುನಃ ಪುನಃ ಪರೀಕ್ಷಿಸಿ ನೋಡಿದೇನೆ: ಚೆನ್ನಾಗಿ ಮಥಿಸಿ ತೆಗೆದು, ನಿಗ್ರಹಿಸಿದ ವಿಚಾರ, ಮಾತಿಗಿಂತ ಬರೆಹಕ್ಕಿಂತ ಪ್ರಭಾವಶಾಲಿ; ಸಂಗ್ರಹಿಸಿ ನಿಗ್ರಹಿಸಿ ಬಳಸಿದ ಆನೆಯ ಶಕ್ತಿಗಿಂತ ನಿಸ್ಸಂದೇಹವಾಗಿ ದೊಡ್ಡದು. ಎಂಥ ಕಡಿ

ದಾದ ಏರಿಕೆಯಲ್ಲೂ ಆನೆಯ ಶಕ್ತಿ ನಂಬಲಾರದಷ್ಟು ಅಸಾಧ್ಯಭಾರವನ್ನು ದಿನವೂ ಹೊತ್ತು ಸಾಗಿಸುವುದನ್ನು ನೋಡುತ್ತೇವೆ. ವಿಚಾರಶಕ್ತಿ ಅದಕ್ಕಿಂತಲೂ ಹೆಚ್ಚಾದ ಆತಂಕಗಳನ್ನು ಗೆಲ್ಲುತ್ತದೆ; ಅದಕ್ಕಿಂತ ಸುಲಭವಾಗಿ ಹೆಚ್ಚು ಭಾರವನ್ನು ಹೊರುತ್ತದೆ. ನಿಗ್ರಹಿತ ನಿಯಮಿತ ವಿಚಾರದ ಬಲವನ್ನು ನಂಬದ ಅವಿಶ್ವಾಸಿಗೆ ಒಂದು ಕಿವಿಮಾತು ಹೇಳುತ್ತೇನೆ. ಪ್ರತಿಯೊಬ್ಬನೂ ಚರಪತ್ರಿಕೆಯಾಗಲಿ, ಬಾಯಿಂದ ಬಾಯಿಗೆ ಒಳ್ಳೆಯ ಸುದ್ದಿಯನ್ನು ಹರಡಲಿ ಹಿಂದೆ ಹುಡುಗರು ಮಾಡುತ್ತಿದ್ದ ಹಾಗೆ, ಹರಕುಮುರಕು ಚೂರು ಸುದ್ದಿಗಳನ್ನು ಡಂಗುರ ಹೊಡೆಯಬೇಕೆಂದಲ್ಲ. ನಾನು ವಿಶ್ವಸನೀಯವಾಗಿ ಕೇಳಿದ್ದನ್ನು ನೆರೆಯವನಿಗೆ ಹೇಳಬೇಕು. ಇದನ್ನು ಯಾವ ಸರಕಾರವೂ ಗೆಲ್ಲಲಾರದು, ಅದುಮಲಾರದು. ಎಲ್ಲಕ್ಕಿಂತ ಅಗ್ಗದ ಪತ್ರಿಕೆ ಇದು; ಎಂಥ ಜಾಣ ಸರಕಾರದ ಯುಕ್ತಿಗೂ ಮೀರಿದ್ದು ಇದು. ಈ ಚರಪತ್ರಿಕೆಗಳು ಹೇಳುವ ಸುದ್ದಿ ನಿಶ್ಚಯವಾಗಿರಬೇಕು. ಹಾಳು ಹರಟೆ, ಊರ ಸುದ್ದಿ ಹರಡಬಾರದು. ತಮಗೆ ಬಂದ ಸುದ್ದಿ ಎಲ್ಲಿಯದು ಎಂಬುದನ್ನು ಪರೀಕ್ಷಿಸಿಕೊಳ್ಳಲಿ; ಬೆಳಿಗ್ಗೆ ಎದ್ದು ಪತ್ರಿಕೆ ತೆಗೆಯದೆಯೇ, ಅದರೊಳಗಿನ ಸುಳ್ಳು ವೇಷದ ಏಕಪಕ್ಷೀಯ ಸುದ್ದಿಯನ್ನು ಓದದೆಯೇ ಅದನ್ನು ಓದಿ ಲಾಭವೂ ಇಲ್ಲ – ತಮಗೆ ಬೇಕಾದ ಸುದ್ದಿಯೆಲ್ಲ ಮಹಾಜನಕ್ಕೆ ತಿಳಿಯುತ್ತದೆ. ಈಗ ನಾನು ಕೊಡುತ್ತಿರುವ ಹೇಳಿಕೆಗಳಿಗೂ ಪ್ರಕಟವಾಗದ ಕಾಲ ಬಂದೀತು. ಸ್ವಕೀಯವಾಗಲಿ ಪರಕೀಯವಾಗಲಿ ಎಲ್ಲ ನಿರಂಕುಶ ಪ್ರಭುತ್ವಗಳಲ್ಲೂ ಬದುಕಿನ ಪಾಡು ಇದೆ.

---

# ಚಲೇ ಜಾವ್ ಚಳುವಳಿ

೧ ಪ್ರತಿಯೊಬ್ಬ ಬ್ರಿಟನ್ನಿಗೆ

೨ ಪ್ರತಿಯೊಬ್ಬ ಜಪಾನಿಗೆ

೩ ಅಮೇರಿಕದ ಗೆಳೆಯರಿಗೆ

೪ ಚೀನಿ ದಳಪತಿಗೆ

೫ ಇಂಗ್ಲೀಷ ಗೆಳೆಯನಿಗೆ

## ಸರಕಾರದ ಉತ್ತರ

ಯಾವ ದಾರಿಯಲ್ಲಿ ಕಾಯಿದೆಭಂಗವು ನಿಶ್ಚಿತವೋ, ಮತ್ತು ಯಾವುದರಿಂದ ಸಾರ್ವಜನಿಕ ಶಾಂತತೆಯು ಭಂಗವಾಗುವುದು ಸ್ಪಷ್ಟ ಕಾಣುತ್ತಿದೆಯೋ ಅಂತಹ ಮಾರ್ಗವನ್ನು ಗಾಂಧೀಜಿಯವರು ಹಿಡಿಯಲು ನಿಶ್ಚಯಿಸಿದ್ದನ್ನು ಕಂಡು ಅತ್ಯಂತ ವಿಷಾದವಾಗುತ್ತದೆ.

## ಗಾಂಧೀಜಿಯವರ ಪ್ರತ್ಯುತ್ತರ

ನಾನು ಮಂಡೆಯನ್ನೂರಿ ತಮಗೆ ರೊಟ್ಟಿಯ ಭಿಕ್ಷೆಯನ್ನು ಬೇಡಿದೆ. ಆದರೆ ರೊಟ್ಟಿಯ ಬದಲು ಕಲ್ಲುಗಳು ನನ್ನ ಉಡಿಯಲ್ಲಿ ಬಿದ್ದವು. ಇಂಗ್ಲೀಷ ರಾಷ್ಟ್ರವು ಯಾವಾಗಲೂ ಶಕ್ತಿಗೇ ಮಣಿಯುತ್ತಿದೆ. ಆದುದರಿಂದ ವಾಯಿಸರಾಯರ ಪತ್ರದಿಂದ ನನಗೇನು ಆಶ್ಚರ್ಯವಾಗಿಲ್ಲ. ಸಾರ್ವಜನಿಕ ತುರಂಗಗಳು ಉತ್ಪನ್ನಮಾಡಿದ ಶಾಂತತೆ ಅಷ್ಟೇ ಜನತೆಗೆ ಗೊತ್ತಿದೆ. ಇಡೀ ಭಾರತವೇ ಒಂದು ಸೆರೆಮನೆ ಇದೆ. ಬ್ರಿಟಿಷರ ಈ ಕಾಯಿದೆಯನ್ನು ನಾನು ಧಿಃಕರಿಸುತ್ತಿದ್ದೇನೆ. ಯಾವ ಕಾಯದೆಯು ರಾಷ್ಟ್ರದ ಉಸಿರನ್ನು ಕಟ್ಟಿ ಸಂಕಟಕ್ಕೀಡು ಮಾಡುವದೋ ಅಂತಹ ಮತ್ತು ಸ್ಮಶಾನಶಾಂತತೆಯನ್ನು ನಿರ್ಮಿಸಿ ಕರುಣಾಜನಕ ಪರಿಸ್ಥಿತಿಯನ್ನುಂಟುಮಾಡುವದೋ ಅಂತಹ ಕಾಯದೆಯನ್ನು ಧ್ವಂಸಮಾಡುವದೇ ನನ್ನ ಕರ್ತವ್ಯವೆಂದು ನಾನು ತಿಳಿಯುತ್ತೇನೆ.

———

# ಧರಸಾನಾ ದಾಳಿ

**[ ಮಹಾತ್ಮರು ದಾಂಡಿಯಲ್ಲಿ ಉಪ್ಪನ್ನು ಮಾಡಿ ಕಾಯಿದೆಭಂಗವನ್ನು ಮಾಡಿದರು. ಕಾಯಿದೆಗೆ ವಿರುದ್ಧವಾದ ಉಪ್ಪನ್ನು ಮಾರಹತ್ತಿದರು. ಕಾಯಿದೆ ಭಂಗವನ್ನು ಕೈಕೊಳ್ಳಲು ಜನರನ್ನು ಪ್ರೋತ್ಸಾಹಿಸಹತ್ತಿದರು. ಅನಂತರ ಮುಂದಿನ ಹೆಜ್ಜೆಯೆಂದು ಧರಸಾನಾ ಉಪ್ಪಿನ ಆಗರದ ಮೇಲೆ ದಾಳಿಯನ್ನು ಮಾಡಲು ನಿಶ್ಚಯಿಸಿ, ವೈಸರಾಯರಿಗೆ ಪತ್ರಬರೆದರು. ]**

**ಮೇ. ೪ ೧೯೩೦**

ಪ್ರಿಯ ಮಿತ್ರರೆ

ದೇವರು ಅನುಗ್ರಹಿಸಿದರೆ, ನಾನು ನನ್ನ ಅನುಯಾಯಿಗಳೊಡನೆ ಧರಸಾನಾ ಉಪ್ಪಿನ ಆಗರಕ್ಕೆ ಹೋಗಿ ಅದನ್ನು ನನ್ನ ವಶಮಾಡಲು ಕೇಳ ಬೇಕೆಂದಿದ್ದೇನೆ. ಧರಸಾನವು ವೈಯ್ಯಕ್ತಿಕ ಆಸ್ತಿ ಎಂದು ಹೇಳಲ್ಪಡುತ್ತಿದೆ. ಆದರೆ ಅದು ತೀರ ಸುಳ್ಳು. ವೈಸರಾಯರ ಮನೆಯು ಎಷ್ಟು ಸರಕಾರಿಯೋ ಅಷ್ಟೇ ಧರಸಾನಾವು ಕೂಡ. ಸರಕಾರಿ ಅಧಿಕಾರಿಗಳ ಅಪ್ಪಣೆಯಿಲ್ಲದೆ ಒಂದು ಹರಳು ಉಪ್ಪನ್ನು ಕೂಡ ಅಲ್ಲಿಂದ ತರಲು ಶಕ್ಯವಿಲ್ಲ. ಈ ದಾಳಿಯನ್ನು ತಾವು ಮೂರು ಬಗೆಯಿಂದ ನಿಲ್ಲಿಸಬಹುದು.

೧. ಉಪ್ಪಿನ ಕರವನ್ನು ತೆಗೆದೊಗೆದು, ೨. ನನ್ನನ್ನೂ ನನ್ನ ಅನುಯಾಯಿಗಳನ್ನೂ ಬಂಧಿಸಿ. ಆ ಸ್ಥಳದಲ್ಲಿ ಎರಡನೇ ತಂಡವು ಬರದಿದ್ದರೆ, ಹಾಗಾಗುವದಿಲ್ಲವೆಂದು ನನ್ನ ಭರವಸೆ. ೩. ಕೇವಲ ಅತ್ಯಾಚಾರದಿಂದ, ಆದರೆ ಅಲ್ಲಿದ್ದವರ ತಲೆಯೊಡೆದರೆ ಮತ್ತೆ ಹೊಸ ತಲೆಗಳು ಕೂಡಲೇ ಅಲ್ಲಿ ಬರದಿದ್ದರೆ ಆದರೆ ಈ ಕಲ್ಪನೆ ಅಶಕ್ಯ.

ಈ ಹೆಜ್ಜೆಯನ್ನಿಕ್ಕುವ ಮೊದಲು ನಾನು ಸಂಶಯದಲ್ಲಿದ್ದೆ. ಸರಕಾರವು ಸತ್ಯಾಗ್ರಹಿಗಳನ್ನು ಸಭ್ಯರೀತಿಯಿಂದ ನಡೆಯಿಸಿಕೊಳ್ಳುವದೆಂದು ಬಗೆದಿದ್ದೆ. ದೈನಂದಿನ ಕಾಯಿದೆ ಪದ್ಧತಿಯಂತೆ ನಡೆಯಿಸಿಕೊಂಡಿದ್ದರೂ ಸಮಾಧಾನವಿತ್ತು.

ಆದರೆ ಕೆಲ ಮುಖಂಡರಿಗೆ ಕಾಯಿದೆಯಂತೆ ನಟಿಸಿ, ಉಳಿದ ಸಾಮಾನ್ಯ ಜನರನ್ನು ಅತ್ಯಂತ ಕ್ರೂರತನದಿಂದಲೂ ಅಸಭ್ಯರೀತಿಯಿಂದಲೂ ಹೊಡೆಬಡೆ ಮಾಡಿದ್ದು ಕಂಡು ಬರುತ್ತಲಿದೆ. ಇಂತಹ ಒಂದೆರಡು ಸಂಗತಿಗಳು ಅಪವಾದಾತ್ಮಕವಿದ್ದರೆ ಆ ಮಾತು ಬೇರೆ. ಆದರೆ ಬಂಗಾಲ, ಬಿಹಾರ, ಉತ್ಕಲ, ಸಂಯುಕ್ತ ಪ್ರಾಂತದಲ್ಲಿ, ಮುಂಬಯಿ ಈ ಎಲ್ಲ ಕಡೆಗೂ ನನ್ನ ಕಡೆಗೆ ಬಂದ ಸತ್ಯಸಂಗತಿಗಳ ಮೇಲಿಂದ ಗುಜರಾಥದಲ್ಲಿಯ ಪರಿಸ್ಥಿತಿಯೇ ಸರ್ವತ್ರವಿದೆ ಎಂದು ನಾನು ಸಿದ್ಧಮಾಡಿ ಕೊಡಬಹುದು ಕರಾಚಿ, ಪೇಶಾವರ ಹಾಗು ಮದ್ರಾಸಗಳಲ್ಲಿ ನಡೆದ ಗೋಳಿಬಾರು ಅನಾವಶ್ಯಕವೂ ಶಾಂತವಾತಾವರಣದಲ್ಲಿ ಮಾಡಲ್ಪಟ್ಟದ್ದೂ ಎಂದು ಕಂಡು ಬಂದಿತು. ತಲೆಯೊಡೆಯುವದು ಎಲುವುಗಳನ್ನು ಮುರಿಯುವುದು ಯಾತಕ್ಕೋಸುಗ? ಸ್ವಯಂಸೇವಕರು ಸರಕಾರದ ಬೆಲೆಯನ್ನು ತೆತ್ತಬೇಕೆಂದಲ್ಲವೆ! ಸ್ವಯಂಸೇವಕರ ದೃಷ್ಟಿಯಿಂದ ನೋಡಿದರೆ ಅವರ ಕೈಯಲ್ಲಿರುವ ಅಮೌಲ್ಯ ಉಪ್ಪನ್ನು ಕಸಿದುಕೊಳ್ಳುವದಕ್ಕಾಗಿ ಮಥುರೆಯಲ್ಲಿ ೧೦ ವರ್ಷದ ಬಾಲಕನ ಕೈಯಲ್ಲಿಯ ಧ್ವಜವನ್ನು ಅಧಿಕಾರಿಯು (ಮ್ಯಾಜಿಸ್ಟ್ರೇಟ) ಕಿತ್ತುಕೊಂಡನು. ಅಲ್ಲಿ ನೆರೆದ ಜನ ಒತ್ತಾಯ ಪಡಿಸಲು ಮರಳಿ ಕೊಡಬೇಕಾಯಿತು. ಆದರೆ ಅವರನ್ನು ನಿಷ್ಠುರ ರೀತಿಯಿಂದ ಹಿಂಸಿಸಲಾಯಿತು. ಇದೆಲ್ಲದರಲ್ಲೂ ಹೀನ ಮನೋವೃತ್ತಿಯು ವ್ಯಕ್ತವಾಯಿತು. ಬಂಗಾಲದಲ್ಲಿ ಉಪ್ಪಿನ ವಿಷಯದಲ್ಲಿ ಜನರನ್ನು ಹಿಡಿಯುವದು ಕಡಿಮೆ ಕಂಡರೂ ಸ್ವಯಂಸೇವಕರ ಕೈಯಲ್ಲಿಯ ಧ್ವಜವನ್ನು ಕಿತ್ತುಕೊಳ್ಳುವದರಲ್ಲಿ ಮಾತ್ರ ಅತ್ಯಂತ ಕ್ರೂರತೆಯು ಕಂಡುಬರುತ್ತಲಿದೆ. ಭತ್ತದ ಬೆಳೆಯನ್ನು ಸುಟ್ಟದ್ದಲ್ಲದೆ ಅನ್ನ ಸಾಮುಗ್ರಿಗಳನ್ನು ನಾಶಮಾಡಲಾಗಿದೆಯೆಂದು ಕೇಳುತ್ತೇನೆ. ಸರಕಾರೀ ಅಧಿಕಾರಿಗಳಿಗೆ ಕಾಯಿಪಲ್ಲೆ ಮಾರಲು ನಿರಾಕರಿಸಿದ್ದಕ್ಕಾಗಿ ಗುಜರಾಥದಲ್ಲಿ ಮಾರ್ಕೆಟನ್ನೇ ಲೂಟಮಾಡಲಾಯಿತು. ಕಾಂಗ್ರೆಸ್ಸಿನ ಸಲುವಾಗಿ ಯಾರು ಅನತ್ಯಾಚಾರವನ್ನು ಸ್ವೀಕರಿಸಿರುವರೋ ಅವರ ಎದುರಿನಲ್ಲೇ ಇದೆಲ್ಲ ನಡೆದುದು. ಸತ್ಯವೃತಿಗಳಾದ ಈ ಜನರ ಮಾತನ್ನು ತಾವು ನಂಬಬೇಕು. ವರಿಷ್ಠ ಅಧಿಕಾರಿಗಳು ಮಾಡಿದ ನಿಷೇಧ ಹಾಗು ನಿರಾಕರಣೆಗಳು ಬಾರಡೋಲಿಯಂತೆಯೇ ಸುಳ್ಳಿನ ಕಂತೆಗಳಾಗಿವೆ. ಈ ಐದು ವಾರಗಳಲ್ಲಿ ಕೂಡ ಅಧಿಕಾರಿಗಳು ಸುಳ್ಳು ಸಂಗತಿಗಳನ್ನು ಹರಡಲು

ಹಿಂದುಮುಂದು ನೋಡದ್ದಕ್ಕಾಗಿ ನನಗೆ ಬಹು ವ್ಯಥೆಯಾಗಿದೆ. ಗುಜರಾಥ ದಲ್ಲಿಯ ಕಲೆಕ್ಟರ ಆಫೀಸಿನಿಂದ ಪ್ರಸಿದ್ಧವಾದ ಪತ್ರಿಕೆಗಳನ್ನೇ ಉದಾಹರಣೆ ಗಾಗಿ ತೆಗೆದುಕೊಳ್ಳುತ್ತೇನೆ.

೧. " ದೊಡ್ಡವರಿಗೆ ವರ್ಷಕ್ಕೆ ಉಪ್ಪು ೫ ಪೌಂಡು ಬೇಕಾಗುತ್ತದೆ. ಅದರ ಕರವು ೩ ಆಣೆಯಾಗುತ್ತದೆ. ಸರಕಾರವು ತನ್ನ ನಿಯಂತ್ರಣವನ್ನು ತೆಗೆದರೆ, ಉಪ್ಪು ತುಟ್ಟಿಯಾಗುವದು. ಸರಕಾರಕ್ಕೆ ಆದ ಹಾನಿಯನ್ನು ಜನತೆಯು ತುಂಬಿಕೊಡಬೇಕಾಗುವದು. ನೀವು ಮಾರುವ ಉಪ್ಪು ತಿನ್ನಲು ಬರುವದಿಲ್ಲ. ಸರಕಾರವು ಅದನ್ನು ಮಾರಲೂ ಕೊಡುವದಿಲ್ಲ. "

೨. " ಸರಕಾರವು ದೇಶದಲ್ಲಿಯ ಕೈಮಗ್ಗದ ಉದ್ಯೋಗವನ್ನು ನಾಶ ಮಾಡಿದೆ ಎಂದು ಗಾಂಧೀಜಿ ಹೇಳುತ್ತಾರೆ. ಆದರೆ ಮಗ್ಗಗಳಿಲ್ಲದ ಹಳ್ಳಿಯೇ ನಿಮ್ಮ ಕಣ್ಣಿಗೆ ಬೀಳಲಾರದು. ಅಲ್ಲದೆ ಹಳ್ಳಿಗಳಲ್ಲಿಯ ನೂಲು ವವರಿಗೆ ಹೊಸಬಗೆಯಿಂದ ನೂಲುವ ಪದ್ಧತಿಯನ್ನು ಕಲಿಸಲಾಗುತ್ತದೆ. ಇದಲ್ಲದೆ ಕಡಿಮೆ ಬೆಲೆಯಲ್ಲಿ ಒಳ್ಳೇ ಯಂತ್ರಸಾಮುಗ್ರಿ ಒದಗಿಸಿಕೊಡ ಲಾಗುತ್ತದೆ. ಈ ಬಗೆಯಾಗಿ ಸರಕಾರದಿಂದ ಸಹಾಯ ದೊರೆಯುತ್ತದೆ. "

೩. ಸರಕಾರವು ತೆಗೆದ ಸಾಲದ ಬಹುಭಾಗವು ಅಂದರೆ ಐದರಲ್ಲಿ ನಾಲ್ಕು ರೂ. ಯೋಗ್ಯ ಕಾರ್ಯಕ್ಕೆ ಉಪಯೋಗವಾಗಿದೆ. "

ಈ ಅವತರಣಿಕೆಗಳನ್ನು ನಾನು ಬೇರೆ ಬೇರೆ ಪತ್ರಿಕೆಗಳಿಂದ ತೆಗೆದು ಕೊಂಡಿದ್ದೇನೆ. ಈ ವಿಧಾನಗಳೆಲ್ಲ ಶುದ್ಧ ಸುಳ್ಳು. ಇದರಲ್ಲಿ ಹೇಳಿದ ಮೂರುಪಟ್ಟು ಉಪ್ಪು ಒಬ್ಬನಿಗೆ ಬೇಕಾಗುತ್ತದೆ. ಅರ್ಥಾತ್ ಅವನು ೯ ಆಣೆ ಕರಕೊಡಬೇಕಾಗುತ್ತದೆ. ಆದರೆ ಈ ಕರವು ಪುರುಷ, ಸ್ತ್ರೀ, ಚಿಕ್ಕಮಕ್ಕಳು, ಎತ್ತು, ಕತ್ತೆ ಇವಾವುಗಳನ್ನೂ ವಿಚಾರ ಮಾಡದೆ ಎಲ್ಲರಿಗೂ ಒಂದೇ ಬಗೆಯಿಂದ ತೆಗೆದುಕೊಳ್ಳಲ್ಪಡುತ್ತದೆ. ಆರೋಗ್ಯದ ವಿಚಾರವನ್ನು ಕೂಡ ಮಾಡುವದಿಲ್ಲ.

ಪ್ರತಿಯೊಂದು ಹಳ್ಳಿಯಲ್ಲಿ ರಾಟಿಯು ತಿರುಗುತ್ತಿದ್ದು ಅವಕ್ಕೆ ಸರಕಾರವು ಒಂದಿಲ್ಲೊಂದು ಬಗೆಯಿಂದ ಉತ್ತೇಜನ ಕೊಡುತ್ತಿದೆ ಎಂಬ ಮಾತಂತೂ ಅತ್ಯಂತ ದುಷ್ಟ ಹಾಗು ಅಸತ್ಯವಾದುದಿದೆ. ನಿತ್ಯ ಜೀವನದಲ್ಲಿ ನಡೆಯಿ ಸುತ್ತಿರುವ ಸರಕಾರದ ಅಸತ್ಯ ಜೀವನಕ್ಕೆ ಇದೊಳ್ಳೇ ಉದಾಹರಣೆಯಾಗಿದೆ.

ನಿನ್ನೆಯೇ ಗುಜರಾಥದಲ್ಲಿ ಒಬ್ಬ ವೀರನನ್ನು ಸುಳ್ಳು ಸಾಕ್ಷಿಗಳಿಂದ ಸೆರೆಮಾಡಿದೆ ಆದರೆ ಅವನು ಅಂದು ಊರಲ್ಲಿಯೇ ಇರಲಿಲ್ಲವೆಂದು ಕೂಗುತ್ತಿದ್ದನು.

ಸ್ವಯಂಸೇವಕರು ಅತ್ಯಂತ ಶಾಂತರೀತಿಯಿಂದ ಕಾರ್ಯಮಾಡುತ್ತಿದ್ದರೆಂದು ಅಧಿಕಾರಿಗಳೇ ಒಪ್ಪುತ್ತಾರೆ. ಅಂತಹ ಸ್ವಯಂಸೇವಕರ ಮೇಲೆ, ಸೆರೆಯ ಅಂಗಡಿಯವರು ದಾಳಿ ಮಾಡಿದರು. ಕಾಯಿದೆಗೆ ವಿರುದ್ಧವಾಗಿ ಸೆರೆಯನ್ನು ಮಾರಿದರು. ಆದರೆ ಸರಕಾರವು ಕಣ್ಣುಮುಚ್ಚಿತು. ಸ್ವಯಂಸೇವಕರ ಶಾಂತತೆಯ ಕಡೆಗೂ ಕಾಯದೇಭಂಗದ ಕಡೆಗೂ ಲಕ್ಷ್ಯವೀಯಲಿಲ್ಲ.

ನಾನು ವರ್ಣಿಸಿದ ಸಂಗತಿಗಳು ತಮಗೆ ಗೊತ್ತು ಕೂಡ ಇರಲಿಕ್ಕಿಲ್ಲ. ಇದರ ಮೇಲೆ ತಮ್ಮ ವಿಶ್ವಾಸವೂ ಕೂಡಲಿಕ್ಕಿಲ್ಲ. ಇದರಿಂದ ತಮ್ಮ ಲಕ್ಷ್ಯವಾದರೂ ಈ ಕಡೆ ಹೊರಳೀತು ಎಂದು ಬಯಸುವೆ.

ಅಧಿಕಾರದ ವಿರಾಟ ಸ್ವರೂಪವನ್ನು ಹೊರಗೆಡವಲು ನಾನು ಆವ್ಹಾನಿಸುವುದು ಹೇಡಿತನವಾದೀತು. ಕಷ್ಟಗಳನ್ನು ಎದುರಿಸಿ, ಸರ್ವತ್ಯಾಗಕ್ಕೂ ಸಿದ್ಧವಾಗಿ ಕಾರ್ಯಪ್ರವೃತ್ತರಾಗಲು ಜನರನ್ನು ಉತ್ತೇಜಿತಗೊಳಿಸಲಾಗಿದೆ. ಆದರಿಂದ ಸರಕಾರದ ಮೂಲ ಸ್ವರೂಪವು ಹೊರಬೀಳಲೇಬೇಕು. ಸರಕಾರವು ತನ್ನ ಕ್ರೂರವಾದ ಮೂಲ ಸ್ವರೂಪವನ್ನು ಹೊರಗೆಡವಿದಷ್ಟು ಸತ್ಯಾಗ್ರಹಕ್ಕೆ ಕಳೆ ಏರುವದು. ಜನರ ಕಷ್ಟ ಸಹಿಷ್ಣುತೆಯು ಹೊರಹೊಮ್ಮುವದು. ಅದ್ಭುತವಾದ ತ್ಯಾಗಕ್ಕೆ ಅವರು ಸಿದ್ಧರಾಗುವರು. ಸ್ವಯಂಸ್ಫೂರ್ತಿಯಿಂದ ಸರಕಾರದ ದಬ್ಬಾಳಿಕೆಯ ಕಷ್ಟಗಳನ್ನು ಸಹನಮಾಡುವವರಲ್ಲಿಯೇ ನಮ್ಮ ವಿಜಯವು. ನನ್ನ ಮಾರ್ಗದಲ್ಲಿರುವ ಸಂಕಟವನ್ನು ನಾನು ಬಲ್ಲೆ. ಜನತೆಯು ನನ್ನ ಉದ್ದೇಶವನ್ನು ತಪ್ಪು ತಿಳಿಯುಕೊಳ್ಳಲಾರದೆಂದು ನನಗೆ ವಿಶ್ವಾಸವಿದೆ. ನನಗೆ ಅನಿಸುವದನ್ನೇ ನಾನು ಆಡುತ್ತೇನೆ. ಈ ೧೫ ವರ್ಷಗಳಿಂದ ಭಾರತದಲ್ಲಿಯೂ ೨೦ ವರ್ಷ ಭಾರತದ ಹೊರಗೂ ಹೇಳಿದ ಮಾತನ್ನೇ, ಅಂದರೆ ಅತ್ಯಾಚಾರವನ್ನು ಜಯಿಸುವ ದಿವ್ಯಮಾರ್ಗವೆಂದರೆ ಅತ್ಯಂತ ಶುದ್ಧ ಅನತ್ಯಾಚಾರವೇ ಎಂದು ಮತ್ತೊಮ್ಮೆ ಸಾರುತ್ತೇನೆ. ಹೀಗೆ ನಾನು ಮೇಲಿಂದ ಮೇಲೆ ಹೇಳುತ್ತಿದ್ದರೂ ಜನ ಅತ್ಯಾಚಾರ ಮಾಡಬಹುದು. ಪ್ರತಿಯೊಬ್ಬನ ಮೇಲೆ ಇತರರ ಹೊಣೆ ಎಷ್ಟು ಬೀಳುವದೋ ಅಷ್ಟೇ ಮಾತ್ರ ನಾನು ಹೊರುವೆ. ಅದಕ್ಕಿಂತಲೂ ಹೆಚ್ಚು ಹೊರಲು ಶಕ್ಯವಿಲ್ಲ. ಹೊಣೆಗಾರಿಕೆಯ ಮಾತನ್ನು

ಬಿಟ್ಟರೂ ಯಾವುದೇ ಕಾರಣದಿಂದ ನಾನು ನನ್ನ ಕಾರ್ಯವನ್ನು ನಿಲ್ಲಿಸುವುದು ಶಕ್ಯವಿಲ್ಲ. ಯಾಕೆಂದರೆ ಅನತ್ಯಾಚಾರವು ಒಂದು ಶಕ್ತಿಯಿದೆ. ಜಗದ್ವಿಭೂತಿಗಳು ಅದನ್ನು ಒಪ್ಪಿದ್ದಾರೆ. ಅದರ ಅನುಭವವು ನನಗೆ ಇದೆ. ಅದರ ಬಗ್ಗೆ ವಿಶ್ವಾಸವು ಹೆಚ್ಚುತ್ತಿದೆ. ಆದುದರಿಂದ ನಾನು ಅನತ್ಯಾಚಾರದ ಕಾರ್ಯಗಳನ್ನು ಮಾಡಲೇ ಬೇಕು.

ನಾನು ನನ್ನ ಮುಂದಿನ ಹೆಜ್ಜೆಯನ್ನು ಆನಂದದಿಂದ ನಿಲ್ಲಿಸುವ ಉದ್ದೇಶದಿಂದ ಉಪ್ಪಿನ ಮೇಲಿನ ಕರವನ್ನು ಕಿತ್ತೊಗೆಯಲು ಬಿನ್ನವಿಸುತ್ತಿದ್ದೇನೆ. ತಮ್ಮ ಅನೇಕ ದೇಶಬಾಂಧವರು ತೀವ್ರವಾಗಿ ಈ ಕರವನ್ನು ನಿಷೇಧಿಸಿದ್ದಾರೆ. ಈ ಕರದ ಮೂಲಕವೇ ಸರಕಾರವನ್ನು ಜಗತ್ತು ಧಿಕ್ಕರಿಸುತ್ತಲಿದೆ. ಕಾಯಿದೇಭಂಗದ ಕ್ರೋಧಾಗ್ನಿಯು ಇದಕ್ಕಾಗಿಯೇ ಹೊರಹೊಮ್ಮಿದೆ. ಈ ಎಲ್ಲ ಮಾತುಗಳು ತಮಗೂ ಸಹಜವಾಗಿಯೇ ಹೊಳೆದಿರಬಹುದು. ಸವಿನಯ ಕಾಯಿದೇಭಂಗವನ್ನು ತಾವು ಜರಿಯಬಹುದು. ಆದರೆ, ಅದರಬದಲು ಅತ್ಯಾಚಾರದ ಪ್ರತಿಕಾರವು ತಮಗೆ ನಡೆದೀತೆ ? ಕಾಯಿದೆ ಭಂಗದ ಪರಿಣಾಮವು ಅತ್ಯಾಚಾರದಲ್ಲಿ ಪರ್ಯವಸಾನವಾಗುವದೆಂದು ತಾವು ವಾದಿಸಬಹುದು. ಆದರೆ, ಅನತ್ಯಾಚಾರದ ಜ್ಞಾನವಿಲ್ಲದೆ ಅದನ್ನು ಕೇಳಲು ಕೂಡ ಸಿದ್ಧರಿಲ್ಲದೆ ಸರಕಾರವು ಜನರನ್ನು ಅತ್ಯಾಚಾರಕ್ಕೆ ಪ್ರವೃತ್ತಗೊಳಿಸಿತು ಎಂದು ಇತಿಹಾಸವು ಉತ್ತರವೀಯುವದೆಂದು ನಾನು ಹೇಳಬಯಸುವೆ. ಯಾಕೆಂದರೆ ಅತ್ಯಾಚಾರವೊಂದೇ ಸರಕಾರಕ್ಕೆ ಗೊತ್ತು ಆದರೆ, ಸರಕಾರವು ಎಷ್ಟೇ ಕೆಣಕಿ ರೊಚ್ಚಿಗೆಬ್ಬಿಸಿದರೂ ಅದರೊಡನೆ ಹೋರಾಡುವ ಸಾಮರ್ಥ್ಯವನ್ನೂ ಸದ್ಬುದ್ಧಿಯನ್ನೂ ಹಿಂದೀಜನರಿಗೆ ದೇವರು ದಯಪಾಲಿಸಲಿ. ಹಾಗು ಅತ್ಯಾಚಾರದ ಮೋಹಕ್ಕೂ ರೊಚ್ಚಿಗೆಬ್ಬಿಸುವದಕ್ಕೂ ಜನ ಬಲಿಬೀಳಲಾರರೆಂದು ನಾನು ಆಶಿಸುತ್ತೇನೆ.

ಈ ಉಪ್ಪಿನ ಕರವನ್ನು ಹಾಗು ಖಾಸಗೀ ರೀತಿಯಿಂದ ಉಪ್ಪು ಮಾಡುವ ನಿರ್ಬಂಧವನ್ನು ತಾವು ಕಿತ್ತೊಗೆಯದಿದ್ದರೆ, ನಾನು ಈ ಪತ್ರದ ಮೊದಲಿಗೆ ಸೂಚಿಸಿದಂತೆ, ದಾಳಿಯನ್ನು ಮಾಡಬೇಕಾಗುವದು.

ತಮ್ಮ ಸಹೃದಯ ಮಿತ್ರ
ಮೋ. ಕ. ಗಾಂಧಿ

# ಲಂಡನ್ನಿನ ಮಾರ್ಗದಲ್ಲಿ

[ ಗಾಂಧೀ-ಅಯರ್ವಿನ ಒಪ್ಪಂದವಾದ ನಂತರ, ಮಳೆ ನಿಂತರೂ ಮರದ ಹನಿ ನಿಲ್ಲಲಿಲ್ಲವೆಂಬಂತೆ ದಬ್ಬಾಳಿಕೆಯು ಪೂರ್ಣ ನಿಲ್ಲಲಿಲ್ಲ. ಒಪ್ಪಂದದ ಭಂಗವಾಗುತ್ತಿದೆ ಎಂದು ಸರಕಾರಕ್ಕೆ ಗಾಂಧೀಜಿಯವರು ತಿಳುಹಿದರು. ಒಪ್ಪಂದದ ಕರಾರುಗಳ ಬಗ್ಗೆ ಟೀಕೆ ಟಿಪ್ಪಣೆಗಳು ಪ್ರಾರಂಭವಾದವು. ಅದರ ವಿಷಯವಾಗಿ ಪಂಚಾಯತಿಗೆ ಒಪ್ಪಿಸುವ ಸೂಚನೆಯನ್ನು ಮಾಡಿದರು. ಅದು ಒಪ್ಪಿತವಾಗದ್ದರಿಂದ ಕೊನೆಗೆ ಕೆಳಗಿನ ತಂತಿಯನ್ನು ವೈಸರಾಯರಿಗೆ ಗಾಂಧೀಜಿಯವರು ಕಳಿಸಿದರು. ]

೧೧ನೇ ಅಗಸ್ಟ, ೧೯೩೧

"ಮುಂಬಯಿ ಸರಕಾರದ ಪತ್ರವು ನನಗೆ ಲಂಡನ್ನಿಗೆ ಹೋಗಲು ಅಶಕ್ಯಮಾಡಿದೆ. ಇದನ್ನು ತಿಳಿಸಲು ನನಗೆ ವಿಷಾದವಾಗಿದೆ. ದೂರುಗಳನ್ನು ಮಾಡುವ ಜನ ಮತ್ತು ಸರಕಾರ ಇವರ ನಡುವೆ ಆದ ಕರಾರುಗಳ ವಿಷಯವಾಗಿ ಉತ್ಪನ್ನವಾಗುವ ಮತಭೇದ ಅಥವಾ ವಿರೋಧಗಳ ವಿಷಯದಲ್ಲಿ ನ್ಯಾಯವನ್ನು ಕೊಡುವ ಅಥವಾ ಶಿಕ್ಷೆಯನ್ನು ವಿಧಿಸುವ ಎರಡೂ ಅಧಿಕಾರಗಳನ್ನು ತನ್ನ ಕಡೆಗೆ ಇಟ್ಟುಕೊಂಡಂತೆ ಇದರಿಂದ ಭಾಸವಾಗುವದು. ಇದನ್ನು ಕಾಂಗ್ರೆಸ್ಸು ಒಪ್ಪುವದು ಸಾಧ್ಯವಿಲ್ಲ. ಮುಂಬಯಿ ಸರಕಾರ ಹಾಗು ಮಾಲ್‌ಕಮ್ ಹೇಲೆಯವರ ಉತ್ತರ, ಸಂಯುಕ್ತಪ್ರಾಂತ ಹಾಗು ಗಡಿನಾಡು ಮತ್ತು ಇತರ ಸ್ಥಳಗಳಲ್ಲಿ ನಡೆಯುತ್ತಿರುವ ದಬ್ಬಾಳಿಕೆ ಇವುಗಳನ್ನು ನೋಡಿದರೆ ಮೊದಲು ಒಪ್ಪಿದಂತೆ, ನಾನು ವಿಲಾಯತಿಗೆ ಹೋಗಕೂಡದೆಂದೇ ಅರ್ಥವಾಗುತ್ತಿದೆ. ಕೊನೆಯ ನಿರ್ಣಯವನ್ನು ಮಾಡುವ ಮುನ್ನ ನಿಮಗೆಲ್ಲ ತಿಳಿಸಿದ್ದೇನೆ. ನಿರ್ಣಯಕ್ಕಾಗಿ ತಮ್ಮ ಉತ್ತರ ಕಾಯುತ್ತಲಿದ್ದೇನೆ.

**ಉತ್ತರ**

೧೩ ಅಗಸ್ಟ, ೧೯೩೧

ತಾವು ಸೂಚಿಸಿದ ಕಾರಣಗಳು ನನಗೆ ಯೋಗ್ಯವೆನಿಸುವದಿಲ್ಲ. ಸರಕಾರದ ಧೋರಣದ ಬಗ್ಗೆಯೇ ತಮ್ಮಲ್ಲಿ ತಪ್ಪು ತಿಳುವಳಿಕೆಯಾಗಿದೆ. ಆದುದರಿಂದಲೇ

ತಮ್ಮಲ್ಲಿ ಅನ್ಯಥಾಕಲ್ಪನೆಯು ಉಂಟಾಗುತ್ತದೆಂದು ನನಗೆ ಅನಿಸುತ್ತಿದೆ. ಸಂಯುಕ್ತ ಪ್ರಾಂತದ ಬಗ್ಗೆ ಮಾಲ್‌ಕಮ್ ಹೇಲೆಯವರ ೬ನೇ ತಾರೀಖಿನ ತಂತಿಯಿಂದ ಎಲ್ಲ ಶಂಕೆಗಳ ನಿರಸನವಾಗಬೇಕಿತ್ತು. ಅದರಂತೆ, ಗುಜರಾಥದ ಬಗ್ಗೆಯೂ, ಮುಂಬಯಿ ಪ್ರಾಂತದ ಪತ್ರಕದ ೩ನೇ ಪ್ಯಾರಾದಿಂದ ತಿಳುವಳಿಕೆಯು ತಿಳಿಯಾಗಬೇಕಿತ್ತು. ೩೧ನೇ ಜುಲೈ ದಿವಸದ ನನ್ನ ಸ್ವಂತ ಪತ್ರದಲ್ಲಿ ಎಂತಹ ಪರಿಸ್ಥಿತಿಯಲ್ಲಿಯೂ ನಾನು ಮಾಡಿಕೊಂಡ ಕರಾರುಗಳನ್ನು ಪಾಲಿಸುವೆನೆಂದು ತಮಗೆ ಆಶ್ವಾಸನ ಕೊಟ್ಟಿದ್ದೇನೆ. ಚಿಕ್ಕಪುಟ್ಟ ಕಾರಣಗಳು ತಮ್ಮ ಲಂಡನ್ನಿನ ಯಾತ್ರೆಯ ಮಾರ್ಗದಲ್ಲಿ ಅಡ್ಡಬರಲಾರವೆಂದು ಆಶಿಸಿದ್ದೆ. ನನ್ನ ಹಾಗು ನಿಮ್ಮ ಆಯುಷ್ಯದ ನಂತರದ ದೀರ್ಘಕಾಲದ ಭಾರತೀಯರ ಭವಿತವ್ಯವನ್ನು ನಿರ್ಣಯಿಸುವ ಶಾಸನ ಪದ್ಧತಿಯ ಚರ್ಚೆಗೆ ತಾವು ಹೋಗುವಿರಲ್ಲವೇ ? ಇಂತಹ ಮಹತ್ವದ ಕಾರ್ಯವು ಎದುರಿಗಿದ್ದಾಗ ತಮ್ಮ ಕೊನೆಯ ನಿರ್ಣಯವೇ ವ್ಯಕ್ತವಾಗುತ್ತಿದ್ದರೆ, ಗಾಂಧೀಜಿ ಪರಿಷತ್ತಿಗೆಬರಲು ಶಕ್ತರಾಗಿಲ್ಲವೆಂದು ಮುಖ್ಯ ಮಂತ್ರಿಗಳಿಗೆ ತಿಳಿಸಬೇಕಾಗುತ್ತದೆ.

## ಗಾಂಧೀಜಿಯವರ ಕೊನೆಯ ಉತ್ತರ— 'ನಕಾರ'

೧೩ನೇ ಆಗಸ್ಟ, ೧೯೩೧

"ತಮ್ಮ ಆಶ್ವಾಸನಕ್ಕಾಗಿ ಆಭಾರಿಯಾಗಿದ್ದೇನೆ. ಈಗ ನಡೆದುದರಲ್ಲಿ ಒಪ್ಪಂದಕ್ಕೆ ವಿಸಂಗತವಾದುದೇನೂ ನಡೆದಿಲ್ಲವೆಂದು ತಮ್ಮ ಅಭಿಪ್ರಾಯವಿದ್ದರೆ, ಒಪ್ಪಂದವನ್ನು ಅರಿತುಕೊಳ್ಳುವದರಲ್ಲಿಯೇ ನಮ್ಮಿಬ್ಬರಲ್ಲಿ ಮೂಲಭೂತ ಅಂತರವಿದೆ ಎಂದು ನನಗೆ ಅನಿಸುತ್ತಿದೆ. ಅಂದಮೇಲೆ ಇಂತಹ ಪರಿಸ್ಥಿತಿಯಲ್ಲಿ ನಾನು ಮೇಲಿನ ನಿರ್ಣಯಕ್ಕೆ ಬರದೆ ಬೇರೊಂದು ಮಾರ್ಗವೇ ಇಲ್ಲ. ನಾನು ಲಂಡನ್ನಿನ ಪರಿಷತ್ತಿಗೆ ಹೋಗಲು ಶಕ್ತಿಮೀರಿ ಯತ್ನಿಸಿದೆ. ಆದರೆ ನನಗೆ ಯಶ ಸಿಗಲಿಲ್ಲ. ಮುಖ್ಯ ಮಂತ್ರಿಗಳಿಗೆ ಅದರಂತೆ ತಿಳಿಸಿರಿ. ಎಲ್ಲ ಪತ್ರವ್ಯವಹಾರವನ್ನೂ ತಂತಿಗಳನ್ನೂ ಪ್ರಕಟನೆಗಾಗಿ ಕಳಿಸುತ್ತಲಿದ್ದೇನೆ."

# ದುಂಡು ಮೇಜಿನ ನಂತರ

## ಮರಳಿ ಕಾಯದೆಭಂಗಕ್ಕೆ

[ ಗಾಂಧೀಜಿಯವರು ಭಾರತಕ್ಕೆ ಮರಳಿದಾಗ ದಬ್ಬಾಳಿಕೆಯ ತಾಂಡವ ನೃತ್ಯ ನಡೆಯುತ್ತಲಿತ್ತು. ಎಲ್ಲವನ್ನೂ ತಿಳಿದುಕೊಂಡು ವೈಸರಾಯರಿಗೆ ಕೆಳಗಿನ ತಂತಿ ಕೊಟ್ಟರು. ]

೨೯ ನೇ ಡಿಸೆಂಬರ, ೧೯೩೧

“ ಗಡಿನಾಡು ಹಾಗು ಸಂಯುಕ್ತ ಪ್ರಾಂತಗಳಲ್ಲಿ ವಿಶೇಷ ಕಾಯಿದೆಗಳನ್ನು ಅನ್ವಯಿಸಲಾಗಿದೆ. ಈ ಎರಡೂ ಪ್ರಾಂತಗಳಲ್ಲಿಯ ನನ್ನ ಜೀವದ ಗೆಳೆಯರನ್ನು ಬಂಧಿಸಲಾಗಿದೆ. ಬಂಗಾಲದಲ್ಲಿಯೂ ಆರ್ಡಿನನ್ಸಿನ ರಾಜ್ಯವು ಪ್ರಾರಂಭವಾಗಿದೆ. ಇವೆಲ್ಲ ಅನರ್ಥಗಳು ನನ್ನ ದಾರಿಯನ್ನೇ ಕಾಯುತ್ತಲಿವೆಯೆಂದು ನಾನು ಭಾರತದಲ್ಲಿ ಕಾಲಿಟ್ಟೊಡನೆಯೇ ಭಾಸವಾಯಿತು. ಇಂತಹ ಪರಿಸ್ಥಿತಿಯುಂಟಾಗಿದೆ ಎಂಬ ಕಲ್ಪನೆಯೂ ಸಹ ನನಗಿರಲಿಲ್ಲ. ನಮ್ಮ ನಿಮ್ಮಲ್ಲಿಯ ಗೆಳತನವು ಇದರಿಂದ ಮುಗಿಯಿತೆಂದು ನಾನು ತಿಳಿಯಬೇಕೆ ? ತಾವು ಇನ್ನೂ ನನ್ನ ಭೇಟಿಯನ್ನು ತೆಗೆದುಕೊಂಡು ನನಗೆ ದಾರಿಯನ್ನು ತೋರಲು ಬಯಸುವಿರಿ ಎಂದು ತಿಳಿಯಲೋ ? ನನಗೆ ದಾರಿಯನ್ನು ತೋರಿದರೆ, ಕಾಂಗ್ರೆಸ್ಸಿಗೆ ಅದರಂತೆ ಸಲಹೆಯನ್ನು ಕೊಡಲು ಅನುಕೂಲವಾಗುವದು. ತಮ್ಮ ಉತ್ತರವನ್ನು ತಾರಿನಿಂದ ನಿರೀಕ್ಷಿಸುತ್ತಿರುವ.

ತಮ್ಮ

ಮೋ. ಕ. ಗಾಂಧಿ

---

## ಸರಕಾರದ ಉತ್ತರ

೩೧ ನೇ ಡಿಸೆಂಬರ, ೧೯೩೧

‘ ತಮ್ಮ ತಂತಿಗಾಗಿ ಅಭಿವಂದನೆಗಳನ್ನು ವೈಸರಾಯರು ಅರ್ಪಿಸಿದ್ದಾರೆ. ಸಂಯುಕ್ತಪ್ರಾಂತ ಹಾಗು ಗಡಿನಾಡಿನ ವಿಶೇಷ ಕಾಯಿದೆಯ ಉಲ್ಲೇಖವನ್ನು ತಾವು ಮಾಡಿರುವಿರಿ. ಸರಕಾರಿ ಅಧಿಕಾರಿಗಳ ಹಾಗು ನಾಗರಿಕರ ಕೊಲೆಗಳನ್ನು ನಿಲ್ಲಿಸುವದಕ್ಕಾಗಿಯೇ ಸರಕಾರವು ಅವುಗಳನ್ನು ಉಪಯೋಗಿಸುವ ಪ್ರಸಂಗ ಬಂದಿದೆ. ’

'ಭಾರತಕ್ಕೆ ಕೂಡಲೆ ಅನ್ವಯಿಸುವ ಸುಧಾರಣೆಗಳನ್ನು ನಿರ್ಮಿಸುವ ಕಾರ್ಯದಲ್ಲಿ ಎಲ್ಲ ಪಕ್ಷಗಳ ಸಹಕಾರವನ್ನು ಸರಕಾರವು ಅಪೇಕ್ಷಿಸುತ್ತಿದೆ. ಸರಕಾರವು ಎರಡೂ ಪಕ್ಷಗಳಿಂದ ಆಗಬೇಕಾದ ಕೆಲಸ. ಹಿಂದುಸ್ಥಾನದ ಹಿತ ದೃಷ್ಟಿಯಿಂದ ಸಂಯುಕ್ತಪ್ರಾಂತ ಮತ್ತು ಗಡಿನಾಡುಗಳಲ್ಲಿ ನಡೆದ ಕಾಂಗ್ರೆಸ ಚಳುವಳಿಯನ್ನು ಕಡೆಗಣಿಸುವಂತಿಲ್ಲ.'

ಸಂಯುಕ್ತಪ್ರಾಂತ ಹಾಗು ಗಡಿನಾಡಿನಲ್ಲಿ ತಮ್ಮ ಕೃತ್ಯಗಳನ್ನು ಸಮರ್ಥಿಸಿ....ನೀವು ದುಂಡು ಮೇಜಿನ ಪರಿಷತ್ತಿನಲ್ಲಿ ಸ್ವೀಕರಿಸಿದ ಧೋರಣ ವನ್ನು ವಿಚಾರ ಮಾಡಿದರೆ, ಸಂಯುಕ್ತಪ್ರಾಂತ ಹಾಗು ಗಡಿನಾಡುಗಳಲ್ಲಿ ನಡೆದ ಚಳವಳಿಯ ಬಗ್ಗೆ ವ್ಯಕ್ತಿಶಃ ನೀವು ಹೊಣೆಗಾರರು ಮತ್ತು ಅಲ್ಲಿ ನಡೆದುದನ್ನು ತಾವು ಸಮರ್ಥಿಸುವಿರಿ ಎಂದು ವೈಸರಾಯರು ನಂಬಲು ಸಿದ್ಧರಿಲ್ಲ. ಅವರ ಈ ನಂಬುಗೆ ಸತ್ಯವಿದ್ದರೆ ನಿಮ್ಮನ್ನು ಭೆಟ್ಟಿಯಾಗಲು ಅವರು ಸಿದ್ಧ. ಮತ್ತು ದುಂಡುಮೇಜಿನ ಪರಿಷತ್ತಿನಲ್ಲಿ ತಾವು ವಹಿಸಿದ ಧೋರಣವೇ ಇದ್ದರೆ, ಅವರು ಸಹಕಾರಕ್ಕೂ ಸಿದ್ಧರು. ತಮ್ಮ ವಿಚಾರಗಳನ್ನು ತಿಳಿಸಲೂ ಅವರ ಸಿದ್ಧತೆ ಇದೆ. ಆದರೆ, ಸಂಯುಕ್ತಪ್ರಾಂತ ಗಡಿನಾಡು ಹಾಗು ಬಂಗಾಲಗಳಲ್ಲಿ ಉಪಯೋಗಿಸಿದ ವಿಶೇಷಾಧಿಕಾರದ ಕಾಯದೆಗಳ ಬಗ್ಗೆ ಮಾತ್ರ ತಮ್ಮೊಡನೆ ಮಾತನಾಡಲು ಸಿದ್ಧರಿಲ್ಲ. ಸ್ವರಾಜ್ಯಕ್ಕೆ ಅವಶ್ಯವಾದ ಶಾಂತತೆ ಸುವ್ಯವಸ್ಥೆ ಗಳನ್ನು ಕಾಯುವದಕ್ಕಾಗಿಯೇ ಅವುಗಳನ್ನು ಉಪಯೋಗಿಸಿದ್ದು, ಅದರ ಕಾರಣವು ನಿರ್ಮೂಲನವಾಗುವ ವರೆಗೂ ಅವು ಇರತಕ್ಕವೇ ಎಂದು ವೈಸ ರಾಯರ ಅಭಿಪ್ರಾಯವಿದೆ.

## ಗಾಂಧೀಜಿಯವರ ಉತ್ತರ

೧ನೇ ಜನೆವರಿ, ೧೯೩೨

ತಮ್ಮ ಉತ್ತರಕ್ಕಾಗಿ ನಾನು ಆಭಾರಿಯಾಗಿದ್ದೇನೆ. ಸ್ನೇಹದಿಂದ ಚಾಚಿದ ಕೈಯನ್ನು ವೈಸರಾಯರು ನಿರಾಕರಿಸಿದ್ದಕ್ಕೆ ವಿಷಾದವಾಗುತ್ತದೆ. ಈ ಅಸಾಮಾನ್ಯ ಕಾಯದೆಗಳ ಬಗ್ಗೆ ಸರಕಾರದ ಅಂತಃಕರಣದಲ್ಲಿ ಏನಿದೆ ಎಂಬುದನ್ನು ಅರಿಯುವದಕ್ಕಾಗಿಯೇ ನಾನು ನಿಮ್ಮ ಕಡೆಗೆ ಧಾವಿಸಿದ್ದು. ನನ್ನ ಬೇಡಿಕೆಗಳ ಬಗ್ಗೆ ಅಭಿನಂದನೆಗಳನ್ನು ಅರ್ಪಿಸುವ ಬದಲು ನನ್ನ ಗೆಳೆಯರ

ಆದರೆ ಈ ವಿಷಯದಲ್ಲಿ ಮಾತ್ರ ನಾನು ಪೂರಾ ಸೋತು ಹೋದೆ. ಸರಕಾರೀ ಪ್ರದೇಶದಲ್ಲಿ ಈ ಪ್ರಸಂಗದಲ್ಲಿ ಮಾಡಿದ ಎಲ್ಲ ಹೇಳಿಕೆಗಳಲ್ಲೂ ಸತ್ಯದ ವಿಪರ್ಯಾಸವೇ ತುಂಬಿದೆ. ಮೃತ್ಯುಮುಖದಲ್ಲಿದ್ದ ಗೆಳೆಯನೊಬ್ಬನ ಸಂಗಡ ವ್ಯವಹಾರ ಮಾಡಲು ಅವಕಾಶ ದೊರೆಯಲಿಲ್ಲ; ಅಷ್ಟು ಅನುಗ್ರಹಹೀನ ನಾಗಿದ್ದೇನೆ. ಚೀಮೂರು ಪ್ರಸಂಗದಲ್ಲಿ ಉಪವಾಸ ಮಾಡುತ್ತಿರುವ ಪ್ರೊ. ಭನ್ಸಾಲಿಯ ಬಗ್ಗೆ ಹೇಳುತ್ತಿದ್ದೇನೆ. ಕಾಂಗ್ರೆಸ್ ನಾಯಕರು ಕೆಲವರ ಹಿಂಸಾಕೃತ್ಯಗಳನ್ನು (?) ನಾನು ಖಂಡಿಸಬೇಕಲ್ಲವೆ? ವೃತ್ತಪತ್ರಿಕೆಗಳ ವಿಕೃತಸುದ್ದಿಯಲ್ಲದೆ ಬೇರೆ ಏನು ಸಾಧನವಿದೆ ನನಗೆ ಹಾಗೆ ಖಂಡಿಸಲಿಕ್ಕೆ? ಈ ಸುದ್ದಿಗಳನ್ನು ನಾನು ಸ್ವಲ್ಪವೂ ನಂಬಲಾರೆ; ಈ ಮಾತು ಒಪ್ಪಿಕೊಳ್ಳುತ್ತೇನೆ. ಇನ್ನೂ ಎಷ್ಟೋ ಬರೆಯಬಲ್ಲೆ; ಆದರೆ ಈ ನನ್ನ ದುಃಖ ಕಥೆಯನ್ನು ಬೆಳೆಸಬಾರದು, ನಾ ಹೇಳಿದುದೇ ಸಾಕು; ಉಳಿದ ವಿವರ ತುಂಬಿಕೊಳ್ಳಲು ಇಷ್ಟು ಸಾಕು.

ಮಾನವ ಜಾತಿಯಲ್ಲಿ ಹಿಂಸೆ, ಅಸತ್ಯಗಳ ಬದಲು ಜೀವನದ ಎಲ್ಲ ರಂಗಗಳಲ್ಲೂ ಸತ್ಯ ಅಹಿಂಸೆಗಳನ್ನು ಹರಡಬೇಕೆಂದು ನನಗೊಂದು ಸಂದೇಶ ೧೯೦೬ರಲ್ಲಿ ಬಂತು. ೧೯೧೫ರಲ್ಲಿ ಈ ಸಂದೇಶ ಹರಡಲೆಂದೇ ನಾನು ದಕ್ಷಿಣ ಆಫ್ರಿಕದಿಂದ ಭಾರತಕ್ಕೆ ಬಂದೆ.

ಸತ್ಯಾಗ್ರಹ ನಿಯಮದಲ್ಲಿ ಸೋಲೆಂಬುದೇ ಇಲ್ಲ. ಆ ಸಂದೇಶ ಹರಡಲು ಸೆರೆಮನೆಯೂ ಒಂದು ಸಾಧನ; ಆದರೆ ಅದಕ್ಕೊಂದು ಮಿತಿಯಿದೆ. ನನ್ನನ್ನು ಒಂದು ಅರಮನೆಯಲ್ಲಿಟ್ಟಿದ್ದೀರಿ, ಬೇಕಾದ ಜೀವನದ ಸೌಕರ್ಯ ಎಲ್ಲವೂ ಇದೆ. ಹರ್ಷದಿಂದಲ್ಲ; ಕರ್ತವ್ಯವೆಂದು ಇವೆಲ್ಲವನ್ನೂ ಬಳಸಿಕೊಂಡಿದ್ದೇನೆ. ಇಂದಲ್ಲ ನಾಳೆ ಅಧಿಕಾರಿಗಳು ನಿರಪರಾಧಿಗಳನ್ನು ಪೀಡಿಸಿದ್ದೇವೆ ಎಂದು ತಿಳಿದಾರು ಎಂಬ ಆಸೆಯಿಂದ ಹಾಗೆ ಮಾಡಿದ್ದೇನೆ. ಆರು ತಿಂಗಳ ಕಾಲ ಅವಧಿ ಹಾಕಿಕೊಂಡಿದ್ದೆ. ಅವಧಿ ಮುಗಿಯುತ್ತಿದೆ. ನನ್ನ ಸಹನೆ ಕೊನೆಗಾಣುತ್ತಿದೆ. ಇಂಥ ಸಂದರ್ಭಗಳಲ್ಲಿ ನಾ ತಿಳಿದಂತೆ ಸತ್ಯಾಗ್ರಹದಲ್ಲಿ ಒಂದು ಮದ್ದುಂಟು. ಉಪವಾಸದಿಂದ ದೇಹದಂಡಿಸುವುದೇ ಆ ಮದ್ದು. ತೀರ ಅಂತ್ಯೋಪಾಯವಾಗಿ ಅಲ್ಲದೆ ಅದನ್ನು ಬಳಸಲಾಗದೆಂದು ಸತ್ಯಾಗ್ರಹ

ನಿಯಮ ಹೇಳುತ್ತಿದೆ. ಉಪವಾಸ ಮಾಡದಿರುವುದು ಸಾಧ್ಯವಿದ್ದ ಪಕ್ಷದಲ್ಲಿ ಉಪವಾಸ ಮಾಡುವ ಮನಸ್ಸಿಲ್ಲ ನನಗೆ. ಹಾಗೆ ಮಾಡಲು ಒಂದೇ ದಾರಿ. ನನ್ನ ತಪ್ಪನ್ನು ನನಗೆ ತೋರಿಸಿಕೊಡಿ, ಅದಕ್ಕೆ ತಕ್ಕಷ್ಟು ಪರಿಹಾರ ಮಾಡುತ್ತೇನೆ. ನನ್ನನ್ನೇ ಕರೆಸಿಕೊಂಡರೂ ಸರಿಯೆ, ನಿಮ್ಮ ಮನಸ್ಸನ್ನು ತಿಳಿದು ನನಗೆ ತಿಳಿಯಹೇಳಬಲ್ಲವರನ್ನು ಯಾರನ್ನಾದರೂ ಕಳಿಸಿದರೂ ಸರಿಯೆ. ನಿಮಗೆ ಮನಸಿದ್ದರೆ ಇನ್ನು ಎಷ್ಟೋ ದಾರಿ ಇವೆ. ಇವಕ್ಕೆ ಬೇಗನೇ ಉತ್ತರವನ್ನು ನಿರೀಕ್ಷಿಸಲೆ ?

— ಹೊಸ ವರ್ಷ ನಮ್ಮೆಲ್ಲರಿಗೂ ಶಾಂತಿ ತರಲಿ.

ನಿಮ್ಮ ನಂಬಿಗೆಯ ಗೆಳೆಯ
ಮೋ. ಕ. ಗಾಂಧಿ

---

**ಅಹಿಂಸಾಪಂಥಿ**

ಜನೆವರಿ, ೧೯೪೩

ಪ್ರಿಯ ಲಿನ್‌ಲಿತ್‌ಗೋ,

ನೀವು ೧೩ರಲ್ಲಿ ಬರೆದ ಪತ್ರ ನಿನ್ನೆ ಮಧ್ಯಾಹ್ನ ೨-೩೦ ಗಂಟೆಗೆ ಬಂತು. ನಿಮ್ಮಿಂದ ಉತ್ತರ ಬರಲಿಕ್ಕಿಲ್ಲನೆಂದು ಆಗಲೇ ನಿರಾಶೆಗೊಂಡಿದ್ದೆ. ನನ್ನ ಆತುರವನ್ನು ಕ್ಷಮಿಸಿರಿ.

ನಿಮ್ಮ ಪತ್ರ ನೋಡಿ ನನ್ನ ಮೇಲೆ ನಿಮ್ಮ ವಿಶ್ವಾಸ ಇನ್ನೂ ಇದೆಯಲ್ಲ ಎಂದು ಸಂತೋಷವಾಯಿತು.

ನನ್ನ ೩೧ರ ಪತ್ರ ನಿಮ್ಮ ಮೇಲೆ ನಾ ಮಾಡಿದ ಗುರುಕು; ನೀವು ಅದಕ್ಕೆ ಬದಲು ಗುರಕಾಯಿಸಿದೀರಿ. ಅದರ ಅರ್ಥ ನನ್ನನ್ನು ನೀವು ಸೆರೆಹಿಡಿದುದು ಸರಿ; ನಿಮ್ಮ ಅಭಿಪ್ರಾಯದಂತೆ ನಾನು ಅಪರಾಧಿ, ನನ್ನಿಂದ ಕೆಲವು ಲೋಪವಾಗಿವೆ. ನಿಮ್ಮ ಅಭಿಪ್ರಾಯ ಇನ್ನೂ ಹಾಗೇ ಇದೆ.

ನನ್ನ ಪತ್ರಕ್ಕೆ ನೀವು ಮಾಡಿರುವ ಅರ್ಥ ಸರಿಯಲ್ಲ. ನಿಮ್ಮ ವ್ಯಾಖ್ಯಾನಕ್ಕನುಸಾರವಾಗಿ ನಿಮ್ಮ ಪತ್ರವನ್ನು ಪುನಃ ಪುನಃ ಓದಿದೇನೆ; ಅದರಲ್ಲಿ ನಿಮ್ಮ ಅರ್ಥ ನನಗೆ ಕಂಡಿಲ್ಲ. ನಾ ಉಪವಾಸ ಮಾಡಬೇಕೆಂದಿದ್ದೆ; ನಮ್ಮ ಪತ್ರವ್ಯವಹಾರದಿಂದ ಏನೂ ಫಲವಾಗದಿದ್ದರೆ, ದೇಶದಲ್ಲೀಗ ಹರಡಿರುವ ಅಭಾವದ ಫಲವಾಗಿ ಕೋಟ್ಯಾಂತರ ಜನ ಪಡುತ್ತಿರುವ ಬಾಧೆಯನ್ನು ತಪ್ಪಿಸಲಾರದೆ ದೇಶದಲ್ಲೀಗ ನಡೆಯುತ್ತಿರುವುದನ್ನೆಲ್ಲ ನಿಸ್ಸಹಾಯನಂತೆ ನೋಡುತ್ತಾ ಕುಳಿತುಕೊಳ್ಳುವದೇ ಫಲವಾದರೆ, ಈಗಲೂ ಉಪವಾಸ ಮಾಡಬೇಕೆಂದೇ ಇದ್ದೇನೆ.

ನನ್ನ ಪತ್ರಕ್ಕೆ ನೀವು ಮಾಡಿದ ಅರ್ಥವನ್ನು ನಾನೊಪ್ಪದಿದ್ದರೆ ಮತ್ತೇನಾದರೂ ಸ್ಪಷ್ಟ ಸೂಚನೆ ಮಾಡೆಂದು ನನಗೆ ಹೇಳಿದೀರಿ. ಕಾಂಗ್ರೆಸ್ ಸಮಿತಿಯ ಸದಸ್ಯರ ಜೊತೆಗೆ ನನ್ನನ್ನು ಇರಿಸಿದರೆ ಅಂಥಾ ಸೂಚನೆಯನ್ನು ನಾನು ಮಾಡೇನು.

ನಿಮಗೆ ನನ್ನ ತಪ್ಪು ತಿಳಿದಂತಾಗಿದೆ. ನನಗೆ ಅದು ತಿಳಿಯುವಂತಾದರೆ ನನ್ನ ಮಟ್ಟಿಗೆ ಯಾರನ್ನೂ ಸಲಹೆ ಕೇಳಬೇಕಾಗಿಲ್ಲ. ನನ್ನ ಕೃತಿಯ ಬಗ್ಗೆ ಸಂಪೂರ್ಣವಾಗಿ ಬಹಿರಂಗವಾಗಿ ಒಪ್ಪಿಕೊಂಡು ಅದಕ್ಕೆ ಬೇಕಾದ ಸಮರ್ಪಣೆ ಮಾಡೇನು. ಆದರೆ ನನಗೆ ನನ್ನದು ತಪ್ಪು ಅನಿಸಿಲ್ಲ. ಸೆಪ್ಟಂಬರ್ ೨೧, ೪೨ ರಲ್ಲಿ ಭಾರತ ಸರಕಾರದ ಕಾರ್ಯದರ್ಶಿಗೆ ನಾ ಬರೆದ ಪತ್ರ ನೀವು ನೋಡಿದಿರೋ ಇಲ್ಲವೋ. ಅದರಲ್ಲೂ ಆಗಸ್ಟ್ ೧೪ರಲ್ಲಿ ನಿಮಗೆ ನಾ ಬರೆದ ಪತ್ರದಲ್ಲೂ ಸೂಚಿಸಿದುದೇ ಈಗಲೂ ನನ್ನ ಅಭಿಪ್ರಾಯ.

ಅಗಸ್ಟ್ ೯ರಿಂದ ಈಚೆಗೆ ನಡೆದ ಸಂಗತಿಗಳನ್ನು ಕಂಡು ನನಗೆ ದುಃಖವಾಗುತ್ತದೆ. ಆದರೆ ಈ ತಪ್ಪನ್ನೆಲ್ಲಾ ನಿಮ್ಮ ತಲೆಯ ಮೇಲೆ ನಾ ಹೊರಿಸಿಲ್ಲವೇ ? ನನಗೆ ಹಿಡಿತವಿಲ್ಲದ ನಾನು ನಡೆಯಿಸಲಾಗದ ಸಂಗತಿಗಳ ಬಗ್ಗೆ ನಾನೇನು ಅಭಿಪ್ರಾಯ ಹೇಳಲಿ ? ನಿಮ್ಮ ನೌಕರರು ನಿಮಗೆ ಕೊಡುವ ಸುದ್ದಿಯನ್ನು ನಂಬಬೇಕಾದದ್ದು ನಿಮಗೆ ವಿಧಿ. ನಾನೂ ಹಾಗೆಯೇ ಮಾಡಬೇಕೆಂದು ನೀವು ಬಯಸಲಾರಿರಿ. ಇಂಥ ಸುದ್ದಿಗಳ ವರದಿ ಹಿಂದೆ ಎಷ್ಟೋ

ಸಲ ತಪ್ಪಾಗಿವೆ. ಅದಕ್ಕೆ ಡಿಸೆಂಬರು ೩೧ರ ಪತ್ರದಲ್ಲಿ ನಿಮ್ಮನ್ನು ನಾ ಕೇಳಿದ್ದು; ನೀವು ಯಾವ ಸುದ್ದಿಗಳನ್ನು ನಂಬಿ ಒಂದು ಅಭಿಪ್ರಾಯ ಮಾಡಿ ಕೊಂಡಿರೊ ಆ ಸುದ್ದಿ ನಿಜವೆಂದು ನನಗೆ ಪ್ರಮಾಣಿಸಿಕೊಡಿ. ನೀವು ಬಯಸಿದ ಮಾತನ್ನು ಹೇಳಲು ನನಗಿರುವ ಕಷ್ಟವನ್ನು ನೀವು ಅರ್ಥ ಮಾಡಿ ಕೊಂಡೀರಿ; ಬುಡದಲ್ಲೆ ಇದೆ ಆ ಕಷ್ಟ.

ಗೋಪುರದ ಮೇಲೆ ನಿಂತು ಬೇಕಾದರೆ ಹೇಳುತ್ತೇನೆ. ಹಿಂದಿದ್ದಂತೆ ಇಂದೂ ನಾನು ಅಹಿಂಸಾಪಂಥಿ; ಅಹಿಂಸೆಯಲ್ಲಿ ನನಗದೇ ವಿಶ್ವಾಸವಿದೆ. ಕಾಂಗ್ರೆಸ್ ಕೆಲಸಗಾರರು ಮಾಡಿದ ಹಿಂಸೆಯನ್ನು ನಿಸ್ಸಂದೇಹವಾಗಿ ಬಹಿರಂಗ ವಾಗಿ ಖಂಡಿಸಿದೇನೆ. ಬಹಿರಂಗವಾಗಿ ಎಷ್ಟೋ ಸಲ ಪ್ರಾಯಶ್ಚಿತ್ತ ಮಾಡಿ ಕೊಂಡಿದೇನೆ. ಉದಾಹರಣೆ ಕೊಟ್ಟು ನಿಮಗೆ ತೊಂದರೆ ಕೊಡಬಾರದು. ಆದರೆ ನಾ ಹೇಳಬಯಸಿದುದು ಇಷ್ಟೆ: ಅಂಥ ಸಂದರ್ಭ ಪ್ರತಿಯೊಂದರಲ್ಲೂ ನಾನು ಸ್ವತಂತ್ರನಾಗಿದ್ದೆ.

ಈ ಸಲ ಈ ಉಪಸಂಹಾರ ಕಾರ್ಯ ಸರಕಾರಕ್ಕೆ ಸೇರಿದ್ದು. ನಿಮ್ಮ ಅಭಿಪ್ರಾಯ ತಪ್ಪೆಂದು ಹೇಳುತಿದೇನೆ; ಅದಕ್ಕೆ ನನ್ನನ್ನು ಕ್ಷಮಿಸಿ. ನೀವು ಕೊಂಚ ನಿಧಾನಿಸಿ, ನಾ ಕೇಳಿದಂತೆ ನನಗೆ ಅವಕಾಶ ಕೊಟ್ಟಿದ್ದರೆ ಎಲ್ಲವೂ ಶುಭವಾಗುತ್ತಿತ್ತು. ಆಗಸ್ಟ ೮ರ ರಾತ್ರಿ ನಾ ಬಹಿರಂಗವಾಗಿ ಹೇಳಿದ್ದೆ. ಆದರೆ ಹಾಗಾಗಲಿಲ್ಲ.

ಭಾರತ ಸರಕಾರ ಹಿಂದೆಷ್ಟೋ ಸಲ ತನ್ನ ತಪ್ಪು ಒಪ್ಪಿಕೊಂಡಿದೆ. ನೆನಪು ಕೊಡಲೆ ? ದಿವಂಗತ ದಳಪತಿ ಡೈಯರನ್ನು ಪಂಜಾಬಿನಲ್ಲಿ ಖಂಡಿಸಿ ದರು. ಕಾನಪುರ ಮಸೀದಿಯ ಮೂಲೆಯೊಂದನ್ನು ಮತ್ತೆ ಕಟ್ಟಿಸಿಕೊಟ್ಟರು ಸಂಯುಕ್ತ ಪ್ರಾಂತದಲ್ಲಿ. ಬಂಗಾಳದಲ್ಲಿ ವಿಭಜನೆಯನ್ನು ರದ್ದು ಮಾಡಿದರು.

ಇದಕ್ಕೆ ಮುಂಚೆ ಎಷ್ಟೋ ದೌರ್ಜನ್ಯ, ಸಾಮೂಹಿಕ ಹಿಂಸೆ ನಡೆದಿತ್ತು; ಅವರೂ ಇದನ್ನು ಮಾಡಿದರು.

ಒಟ್ಟುಗೂಡಿಸಿ ಹೇಳುವುದಾದರೆ,

(೧) ನಾನು ವೈಯಕ್ತಿಕವಾಗಿ ಏನಾದರೂ ಮಾಡಬೇಕೆಂದು ನಿಮ್ಮ ಅಭಿಮತವಾದರೆ ನನ್ನದು ತಪ್ಪು ಎಂದು ನನಗೆ ಪ್ರಮಾಣಿಸಿಕೊಡಿ. ಬೇಕಾದಷ್ಟು ಸವರಣೆ ಮಾಡುತ್ತೇನೆ.

(೨) ಕಾಂಗ್ರೆಸ್ಸಿನ ಪರವಾಗಿ ಏನಾದರೂ ಮಾಡಬೇಕು ಎಂಬುದಾದರೆ ಕಾಂಗ್ರೆಸ್ ವರ್ಕಿಂಗ್ ಕಮೀಟಿಯ ಸದಸ್ಯರ ನಡುವೆ ನನ್ನನ್ನಿಡಿ. ಈ ಬಿಕ್ಕಟ್ಟನ್ನು ಪರಿಹರಿಸಲು ನಿಮ್ಮ ಮನಸ್ಸು ಮಾಡಿ; ನಾ ಬೇಡುತ್ತೇನೆ.

ನಿಮ್ಮ ಪತ್ರಕ್ಕೆ ಪೂರ್ಣ ಉತ್ತರಕೊಡದಿದ್ದ ಪಕ್ಷದಲ್ಲಿ, ಇದರಲ್ಲೇನಾದರೂ ಅಸ್ಪಷ್ಟವಾಗಿದ್ದಲ್ಲಿ ಅದನ್ನು ತಿಳಿಸಿ: ನಿಮಗೆ ಸಮಾಧಾನ ಹೇಳಲು ಪ್ರಯತ್ನ ಮಾಡುತ್ತೇನೆ.

ನನಗೆ ಮುಚ್ಚುಮರೆ ಸಂಕೋಚ ಏನೂ ಇಲ್ಲ. ನನ್ನ ಪತ್ರಗಳನ್ನು ಬೊಂಬಾಯಿ ಸರಕಾರದ ಮೂಲಕ ಕಳುಹಿಸುತ್ತಿರುವ ಹಾಗೆ ಕಾಣುತ್ತದೆ. ಇದರಿಂದ ಬಹಳ ಆಲಸ್ಯವಾಗುತ್ತದೆ. ಈ ವಿಷಯದಲ್ಲಿ ಕಾಲ ಅತ್ಯಮೂಲ್ಯ; ನನ್ನ ಪತ್ರಗಳನ್ನು ನಿಮಗೆ ನೇರವಾಗಿ ಕಳಿಸುವಂತೆ ಇಲ್ಲಿನ ಸೂಪರಿಂಟೆಂಡಂಟರಿಗೆ ನೀವು ತಿಳಿಸಬಹುದಲ್ಲವೆ?

ನಿಮ್ಮ ನಂಬಿಗೆಯ ಗೆಳೆಯ
ಮೋ. ಕ. ಗಾಂಧಿ

---

## ಒಂದಕ್ಕೆರಡಲ್ಲ ಹತ್ತು ಸಾವಿರ

ಜನವರಿ ೨೯, ೪೩

ಪ್ರಿಯ ಲಿನ್‌ಲಿತ್‌ಗೋ,

ನನ್ನ ಪತ್ರಕ್ಕೆ ನೀವು ಶೀಘ್ರವಾಗಿ ಕೊಟ್ಟ ಉತ್ತರಕ್ಕೆ ಕೃತಜ್ಞನಾಗಿದ್ದೇನೆ. ನಿಮ್ಮ ಪತ್ರ ಸ್ಪಷ್ಟವಾಗಿದೆಯೆಂದು ನಾನು ಹೇಳುವ ಹಾಗಿದ್ದರೆ ಚೆನ್ನಾಗಿತ್ತು. ಯಾವುದೋ ಒಂದು ಅಭಿಪ್ರಾಯವನ್ನು ಬಲವಾಗಿ ನಂಬಿದ ಮಾತ್ರಕ್ಕೆ ಅದು

ಸ್ಪಷ್ಟತೆ ಎನ್ನಲಾರಿರೆಂದು ನಂಬಿದ್ದೇನೆ. ಅಗಸ್ಟ್ ೯ರ ತರುವಾಯ ದೇಶದಲ್ಲಿ ಹರಡಿದ ಹಿಂಸಾಕೃತ್ಯಗಳಿಗೆ ಕಾಂಗ್ರೆಸ್ಸು ಆಗಸ್ಟಿನಲ್ಲಿ ಮಾಡಿದ ತೀರ್ಮಾನವೇ ಕಾರಣ ಎಂದು ನೀವು ನಂಬಿದ್ದೀರಿ ಈ ಅಭಿಪ್ರಾಯ ಸರಿಯೆಂದು ನನ್ನ ಮನಸ್ಸನ್ನು ನೀವು ಒಪ್ಪಿಸಬೇಡವೇ ? ಹಾಗೆ ಮಾಡಬೇಕೆಂದು ನಿಮ್ಮನ್ನು ಬೇಡಿದೆ; ಕೊನೆಯ ಉಸಿರಿನ ತನಕ ಬೇಡುತ್ತೇನೆ. ಈ ಹಿಂಸೆಗೆಲ್ಲ ಸರಕಾರ ಇಟ್ಟ ಅನವಶ್ಯಕವಾದ ಘೋರತರವಾದ ಹೆಜ್ಜೆಯೇ ಕಾರಣವಲ್ಲವೇ?

ಆಗಸ್ಟ್ ತೀರ್ಮಾನದಲ್ಲಿ ಯಾವ ಭಾಗ ಅಪರಾಧವೋ ಅದನ್ನು ಕೂಡ ನೀವು ಹೇಳಿಲ್ಲ. ಕಾಂಗ್ರೆಸ್ಸಿನ ನೀತಿ ಅಹಿಂಸಾ ನೀತಿ. ತೀರ್ಮಾನ ಅದನ್ನು ಉಪಸಂಹಾರ ಮಾಡಿಲ್ಲ. ಫ್ಯಾಸಿಜಂ ಯಾವ ತರದ್ದೇ ಆಗಲಿ, ಅದಕ್ಕೆ ಖಂಡಿತವಾಗಿ ವಿರೋಧಿ ಕಾಂಗ್ರೆಸ್ಸು. ಯುದ್ಧ ಪ್ರಯತ್ನದಲ್ಲಿ ಕಾಂಗ್ರೆಸ್ಸು ಸಹಾಯಮಾಡಬಯಸುತ್ತದೆ. ಆದರೆ ಇದೀಗ ರಾಷ್ಟ್ರದ ಸಹಕಾರ ಸಾಧ್ಯವಾಗುವ, ಅಸಹಕಾರ ಪರಿಣಾಮಕಾರಿಯಾಗುವ ಸಂದರ್ಭದಲ್ಲಿ ಮಾತ್ರ. ಈ ಅಭಿಪ್ರಾಯ ಅಷ್ಟು ನಿಂದನೀಯವೇ ? ಸವಿನಯ ಶಾಸನೋಲ್ಲಂಘನದ ಕರಾರು ಹಾಕಿದ ಭಾಗವನ್ನು ಆ ತೀರ್ಮಾನದಲ್ಲಿ ಆಕ್ಷೇಪಿಸಬಹುದು. ಆದರೆ ಅದೇ ಒಂದು ಆಕ್ಷೇಪಣೆ ಆಗಲಾರದು. ಗಾಂಧಿ-ಇರ್ವಿನ್ ಒಪ್ಪಂದದಲ್ಲಿ ಶಾಸನೋಲ್ಲಂಘನ ತತ್ವ ಸೂಚ್ಯವಾಗಿ ಅಡಕವಾಗಿದ್ದೇ ಇದೆ. ಈ ಶಾಸನ ಭಂಗ ಚಳುವಳಿ ಕೂಡ ನಿಮ್ಮನ್ನು ನಾ ಬೇಡಿದ ಸಂದರ್ಶನದ ಫಲ ತಿಳಿಯುವ ಮೊದಲೆ ಪ್ರಾರಂಭಿಸುವಂತಿರಲಿಲ್ಲ.

ತರುವಾಯ ನನ್ನ ಮೇಲೆ ಕಾಂಗ್ರೆಸ್ಸಿನ ಮೇಲೆ ಭಾರತ ಸರಕಾರದ ಕಾರ್ಯದರ್ಶಿಯಾದ ಜವಾಬ್ದಾರಿಯುಳ್ಳ ಮಂತ್ರಿ ಮಾಡಿದ ನಿರಾಧಾರವಾದ ಆಕ್ಷೇಪಣೆ ನೋಡಿ. ಅದನ್ನು ಪ್ರಮಾಣಿಸಲು ಸಾಧ್ಯವಿಲ್ಲವೆಂದು ನನ್ನ ಅಭಿಪ್ರಾಯ.

ಸರಕಾರ ತನ್ನ ಕೃತಿಯನ್ನು ದೃಢವಾದ ಪ್ರಮಾಣಗಳಿಂದ ಸಮರ್ಥಿಸಬೇಕು. ಸುಮ್ಮನೆ ಅಧಿಕಾರ ಬಲದಿಂದ ಹೀಗೆ ಎಂದು ಹೇಳಿದರೆ ಸಾಲದು. ಅನಾಯಾಸವಾಗಿ ನಾನಿದನ್ನು ಹೇಳಬಲ್ಲೆ.

ಕಾಂಗ್ರೆಸ್ಸಿನವರೆಂದು ಹೆಸರಾದವರು ಹತ್ಯೆಮಾಡಿದಾರೆ ಎಂದು ನನ್ನ ಮುಖಕ್ಕೆ ನೀವು ಸುದ್ದಿ ಎಸೆಯಬಹುದು. ನಿಮಗೆ ಕಂಡಹಾಗೆಯೇ ಹತ್ಯೆಗಳ ಸಂಗತಿ ನನಗೂ ಸ್ಪಷ್ಟವಾಗಿ ಕಾಣುತ್ತವೆ. ಅದಕ್ಕೆ ನನ್ನ ಉತ್ತರ ಇದು. ಸರಕಾರ ಜನರನ್ನು ರೇಗಿಸಿ ಹುಚ್ಚು ಹಿಡಿಯುವಂತೆ ಮಾಡಿತು. ಮೇಲೆ ಹೇಳಿದ ದಸ್ತಗಿರಿಗಳನ್ನು ಮಾಡಿ ಹಿಂಸೆಗೆ ಅವರೇ ದಾರಿ ಮಾಡಿದರು. ಏಟಿ-ಗೇಟು ಎಂಬ ನಿಯಮಕ್ಕೆ ಒಳಲಾಗಿ 'ಒಂದಕ್ಕೆ ಹತ್ತು ಸಾವಿರ'ವೆಂಬ ಸೂತ್ರವನ್ನು ವಿಸ್ತಾರ ಪ್ರಮಾಣದಲ್ಲಿ ವ್ಯವಸ್ಥೆಗೊಳಿಸಿ ಏಸುಕ್ರಿಸ್ತ ಉಪದೇಶಿಸಿದ ಅಪ್ರತಿಕಾರದ ತತ್ವವನ್ನು ತುಳಿದು ಆರ್ಭಟಿಸಿದ ಮಾತ್ರಕ್ಕೆ ಅದು ಹಿಂಸೆಯಲ್ಲದೆ ಹೋದೀತೆ? ಸರ್ವಶಕ್ತವಾದ ಭಾರತ ಸರಕಾರದ ಈ ದಬ್ಬಾಳಿಕೆಯ ಕೃತಿಯನ್ನು ಬೇರಾವ ವಿಧವಾಗಿಯೂ ಅರ್ಥಮಾಡಿಕೊಳ್ಳಲಾರೆ.

ಇಡೀ ಭಾರತವನ್ನೇ ಆವರಿಸಿದ ಅಭಾವದ ದೆಸೆಯಿಂದ ಕೋಟ್ಯಂತರ ಬಡ ಜನಕ್ಕೆ ಒದಗಿದ ದುಃಖದ ಚಿತ್ರನೋಡಿ. ಈ ಸಂದರ್ಭದಲ್ಲಿ ಚುನಾಯಿತ ಶಾಸನ ಸಭೆಗೆ ಉತ್ತರವಾದಿಯಾದ ನಿಜವಾದ ರಾಷ್ಟ್ರೀಯ ಪ್ರಭುತ್ವ ಇದ್ದಿದ್ದರೆ ಈ ಗೋಳನ್ನು ಪೂರಾ ತಡೆಯುವದಾಗದಿದ್ದರೂ, ಎಷ್ಟೋ ಮಟ್ಟಿಗೆ ಕಡಿಮೆಯಾಗಬಹುದಿತ್ತು.

ನನ್ನೀ ನೋವಿಗೆ ಸಂಜೀವನ ಔಷಧಿ ಏನೂ ಸಿಗದಿದ್ದರೆ ಸತ್ಯಾಗ್ರಹಿಗಳಿಗಿರುವ ನಿಯಮವನ್ನು ಅವಲಂಬಿಸಬೇಕಾದೀತು. ಫ್ರೆಬ್ರುವರಿ ೯ನೇ ತಾರೀಖಿಗೆ ಉಪಹಾರವಾದ ಮೇಲೆ ಉಪವಾಸ ಪ್ರಾರಂಭಮಾಡಿ ಮಾರ್ಚ ೨ ರ ವರೆಗೆ ೨೧ ದಿನ ಉಪವಾಸ ನಡೆಸಬೇಕು. ಸಾಧಾರಣವಾಗಿ ಉಪವಾಸದಲ್ಲಿ ಉಪ್ಪು ಬೆರೆಸಿದ ನೀರು ಕುಡಿಯುವುದು ನನಗೆ ರೂಢಿ. ಈಚೆಗೆ ನೀರು ನನ್ನ ಮೈಗೆ ಒಗ್ಗುವುದಿಲ್ಲ. ಆದ್ದರಿಂದ ನೀರಿಗೆ ರುಚಿ ಬರುವಂತೆ ನಿಂಬೆಯ ಹಣ್ಣಿನ ರಸ ಸೇರಿಸಬೇಕೆಂದಿದ್ದೇನೆ. ಈ ಸಲ ಆಮರಣಾಂತ ಪ್ರಾಯೋಪವೇಶ ಮಾಡುವ ಬಯಕೆ ನನಗಿಲ್ಲ; ದೈವಚಿತ್ತವಿದ್ದರೆ ಈ ಪರೀಕ್ಷೆ ಪಾರಾಗಿ ಬದುಕಬೇಕೆಂದಿದ್ದೇನೆ ಸರಕಾರ ನಾ ಕೇಳಿದ ಪರಿಹಾರ ಕೊಟ್ಟರೆ ಈ ಉಪವಾಸ ಬೇಗನೇ ಮುಕ್ತಾಯಗೊಳ್ಳಬಹುದು.

ಈ ಪತ್ರವನ್ನು ಖಾಸಗಿ ಎಂದು ನಾನು ಗುರುತುಮಾಡಿಲ್ಲ, ಹಿಂದಿನ ಎರಡು ಪತ್ರಕ್ಕೆ ಮಾಡಿದಂತೆ. ಅವೂ ಅಂತಹ ಖಾಸಗೀ ಪತ್ರಗಳೇನಾಗಿರಲಿಲ್ಲ; ಅಂತರಂಗದ ಪ್ರಾರ್ಥನೆ ಮಾತ್ರ.

ನಿಮ್ಮ ನಂಬಿಕೆಯ ಗೆಳೆಯ,
ಮೋ. ಕ. ಗಾಂಧಿ

ತರುವಾಯ:— ಕೆಳಗೆ ಬರೆದುದು ಬಿಟ್ಟುಹೋಗಿದೆ, ಕಾಂಗ್ರೆಸ್ ತನ್ನ ಆಗಸ್ಟ್ ಠೀರ್ಮಾನದ ಪ್ರಕಾರ ತನಗಾಗಿ ಏನನ್ನೂ ಬೇಡಲಿಲ್ಲವೆಂಬ ಮುಖ್ಯಾಂಶವನ್ನು ಸರಕಾರ ಕಣ್ಣೆತ್ತಿ ನೋಡುತ್ತಿಲ್ಲವೆಂಬುದು ಸ್ಪಷ್ಟವಾಗಿದೆ. ಕಾಂಗ್ರೆಸ್ ಕೇಳಿದ್ದೆಲ್ಲವೂ ಜನರಿಗಾಗಿ, ನಿಮಗೆ ಗೊತ್ತಿರಬೇಕು. ರಾಷ್ಟ್ರೀಯ ಸರಕಾರ ರಚಿಸಲು ಜಿನ್ನಾರನ್ನೇ ಕರೆಯಿರಿ; ಯುದ್ಧ ಕಾಲದಲ್ಲಿ ಅಗತ್ಯವಾದ ಸವರಣೆಗಳೊಂದಿಗೆ ಚುನಾಯಿತ ಸಭೆಗೆ ಉತ್ತರವಾದಿಯಾದ ರಾಷ್ಟ್ರೀಯ ಸರಕಾರ ರಚಿತವಾಗಲಿ ಎಂದು ಕಾಂಗ್ರೆಸ್ ಸಿದ್ಧವಾಗಿತ್ತು. ವರ್ಕಿಂಗ್ ಕಮೀಟಿಯ ಜನರು ಯಾರೂ ಸರೋಜಿನಿದೇವಿ ವಿನಾ ನನ್ನ ಜೊತೆಯಲ್ಲಿಲ್ಲ ಮುದರಿಂದ, ಅವರ ಅಭಿಪ್ರಾಯವನ್ನು ನಾನರಿಯೆ. ಬಹುಶಃ ಕಮೀಟಿ ತನ್ನ ಅಭಿಪ್ರಾಯವನ್ನು ಬದಲಿಸಲಾರದು.

---

## ಅಗ್ನಿ ಪರೀಕ್ಷೆ

ಫೆಬ್ರುವರಿ ೭, ೧೯೪೩

ಪ್ರಿಯ ಲಿನ್‌ಲಿತ್‌ಗೋ,

ಫೆಬ್ರುವರಿ ೫ ರಲ್ಲಿ ನೀವು ಬರೆದ ದೀರ್ಘ ಉತ್ತರ ತಲಪಿತು, ವಂದನೆಗಳು. ನೀವು ಬರೆದ ಕೊನೆಯ ಮಾತನ್ನು ಮೊದಲು ಪ್ರಾರಂಭ ಮಾಡುತ್ತೇನೆ. ೯ಕ್ಕೆ ಪ್ರಾರಂಭವಾಗುವ ಉಪವಾಸದ ವಿಷಯ. ಸತ್ಯಾಗ್ರಹಿಯ ದೃಷ್ಟಿಯಲ್ಲಿ ನಿಮ್ಮ ಪತ್ರ ಉಪವಾಸಕ್ಕೊಂದೌತಣ. ಈ ಹೆಜ್ಜೆ ಹಾಕಿದುದರ ಎಲ್ಲಾ

ಹೊಣೆಯೂ ನನ್ನದು; ನನ್ನದೇ ಸರಿ. ನಿಮ್ಮ ಲೇಖನಿಯಿಂದ ಒಂದು ಮಾತು ಜಾರಿಬಂದಿದೆ, ನಾನದಕ್ಕೆ ಸಿದ್ಧನಾಗಿರಲಿಲ್ಲ. ಎರಡನೇ ವಾಕ್ಯ ಬೃಂದದ ಕೊನೆಯಲ್ಲಿ ಈ ಹೆಜ್ಜೆಯನ್ನು "ಸುಲಭವಾಗಿ ಜಾರಿಕೊಳ್ಳುವ ಉಪಾಯ" ಎಂದಿದೀರಿ. ಗೆಳೆಯರಾದ ನೀವು ಕೂಡ ಇಂಥ ತುಚ್ಛವಾದ ಭೀರುತನದ ಉದ್ದೇಶವನ್ನು ನನಗೆ ಆರೋಪಿಸಿದ್ದು ನನ್ನ ಬುದ್ಧಿಗೆ ನಿಲುಕ ದಂತಿದೆ. ಇಷ್ಟೇ ಅಲ್ಲ, ಇದೊಂದು ಬಗೆಯ 'ರಾಜಕೀಯ ಕುತಂತ್ರ' ಎಂದಿದೀರಿ. ಸಾಲದ್ದಕ್ಕೆ ಹಿಂದೆ ನಾ ಬರೆದ ಲೇಖಗಳನ್ನು ಈಗಲೂ ನಾ ಸಮರ್ಥಿಸುತ್ತೇನೆ. ಈಗ ನಾ ಹಾಕಲಿರುವ ಹೆಜ್ಜೆಗೂ ಅದಕ್ಕೂ ಏನೂ ಅಸಂಬದ್ಧತೆಯಿಲ್ಲ. ಆ ಲೇಖನಗಳನ್ನು ನೀವೇ ಓದಿದೀರೋ ಇಲ್ಲವೋ ನನಗನುಮಾನ.

ಮುಕ್ತಮನದಿಂದ ನನ್ನ ತಪ್ಪನ್ನು ತೋರಿಸಿಕೊಡಿ ಎಂದು ನಿಮ್ಮ ಬಳಿ ಸಾರಿದ್ದೇನೆ. ಈಗಲೂ ಅದನ್ನೇ ಹೇಳುತ್ತೇನೆ; ಈಗ ಪ್ರಕಟವಾಗಿರುವ ಸುದ್ದಿಯನ್ನು ನಂಬುವುದಿಲ್ಲ ಎಂದ ಮಾತ್ರಕ್ಕೆ ಮುಕ್ತಮನವಲ್ಲ ಎನ್ನ ಬಹುದೇ. ಇದು ಅಸಂಬದ್ಧವಲ್ಲ.

ನನ್ನ ಗೆಳೆಯರ ಮಾತಿರಲಿ–ನಾನೇ 'ಈ ನೀತಿಯಿಂದ ಹಿಂಸೆ ಫಲಿ ಸೀತು ಎಂದು ನಿರೀಕ್ಷಿಸಿದ್ದೆ' ಎಂದೂ 'ಅದನ್ನು ಕ್ಷಮಿಸಲು ಸಿದ್ಧನಿದ್ದೆ' ಎಂದೂ 'ಕಾಂಗ್ರೆಸ್ ನಾಯಕರ ದಸ್ತಗಿರಿಗೆ ಪೂರ್ವದಲ್ಲಿಯೇ ರೂಪುಗೊಳಿಸಿದ ಯೋಜನೆಯಲ್ಲಿ ಈ ಹಿಂಸೆ ಒಂದು ಭಾಗ' ಎಂದೂ ನೀವು ಹೇಳುತ್ತೀರಿ. ಇಂಥ ಗುರುತರ ಆಕ್ಷೇಪಕ್ಕೆ ಯಾವ ಸಾಕ್ಷ್ಯವನ್ನೂ ನಾ ಕಂಡಿಲ್ಲ.

ಇನ್ನೂ ಎಷ್ಟೋ ಸಾಕ್ಷ್ಯ ಸಾಹಿತ್ಯ ಪ್ರಕಟವಾಗಬೇಕಾಗಿದೆಯೆಂದು ನೀವೆ ಒಪ್ಪಿಕೊಂಡಿದೀರಿ. ನೀವು ದಯವಿಟ್ಟು ಕಳಿಸಿದ ಗೃಹಮಂತ್ರಿಯ ಭಾಷಣ ಪ್ರಾಸಿಕ್ಯೂಶನ್ ಲಾಯರರ ಪ್ರಾರಂಭ ಭಾಷಣವಿದ್ದಂತಿದೆ, ಅಷ್ಟೇ, ಅದಕ್ಕಿಂತ ಹೆಚ್ಚೇನೂ ಇಲ್ಲ. ಕಾಂಗ್ರೆಸ್ ಜನರ ವಿರುದ್ಧವಾದ ಅಸಮರ್ಥ ನಿಂದೆ ಕೆಲವು ಅದರಲ್ಲಿದೆ. ಈ ಹಿಂಸೆಯ ಈ ಉದ್ರೇಕವನ್ನು ಬಹಳ ಚೆನ್ನಾಗಿ ವರ್ಣಿಸಿದ್ದಾರೆ. ಆದರೆ ಹೀಗೇಕೆ ಆಯಿತೋ ಅದನ್ನು ಅವರು

ತಿಳಿಸಿಲ್ಲ. ಗಂಡಸರನ್ನೂ ಹೆಂಗಸರನ್ನೂ ವಿಚಾರಣೆ ಕೂಡ ಮಾಡದೆ, ಅವರಿಗೆ ತಮ್ಮ ಪರವಾಗಿ ಏನನ್ನೂ ಹೇಳಗೊಡದೆ ಶಿಕ್ಷೆಗೆ ಗುರಿಮಾಡಿದೀರಿ. ಅವರ ಅಪರಾಧವೇನು, ಅದಕ್ಕೇನು ಸಾಕ್ಷ್ಯ ಎಂದು ನಾ ಕೇಳಿದರೆ ತಪ್ಪೆ? ನೀವು ಹೇಳಿದ್ದರಲ್ಲಿ ಯಾವುದೂ ಒಪ್ಪುವಂತಹುದಲ್ಲ. ಇಂಗ್ಲಿಷ್ ನ್ಯಾಯಶಾಸ್ತ್ರ ಪ್ರಕಾರ ಸಾಕ್ಷ್ಯ ತೋರಿಸಿ.

ವರ್ಕಿಂಗ್ ಕಮಿಟಿ ಸದಸ್ಯರೊಬ್ಬರ ಹೆಂಡತಿ 'ಬಾಂಬ್‌ಸ್ಫೋಟನೆ, ಇತರ ಕ್ರಾಂತಿಕಾರಿ ಕೃತ್ಯಗಳಲ್ಲಿ ತೊಡಗಿದ್ದಾಳೆ ಎಂದರೆ ಆಕೆಯನ್ನು ನ್ಯಾಯಸ್ಥಾನದಲ್ಲಿ ವಿಚಾರಿಸಿ ಅಪರಾಧಿ ಎಂದು ಕಂಡುಬಂದರೆ ಶಿಕ್ಷೆಕೊಡಿ. ನೀವು ಸೂಚಿಸಿದಾಕೆ ಹಾಗೆ ಮಾಡಿದ್ದರೂ ಆಗಸ್ಟ್ ೯ರ ದಿನ ನಡೆದ ಮೇಲೆ ನಾಯಕರೆಲ್ಲರೂ ಒಂದೇಸಲ ದಸ್ತಗಿರಿಯಾದ ಮೇಲೆಯೇ ನಾನು ಸೂಚಿಸಿದ ಹಿಂಸಾಕಾಂಡ ಇರಬೇಕು.

ಕಾಂಗ್ರೆಸ್ ಮೇಲಿರುವ ಅಪರಾಧಗಳ ಪಟ್ಟಿಯನ್ನು ಪ್ರಕಟಿಸಲು ಇದು ಸಮಯವಲ್ಲ ಎಂದು ಹೇಳಿದೀರಿ. ನಿಷ್ಪಾಕ್ಷಿಕವಾದ ಪಂಚಾಯಿತಿ ನಡೆದರೆ ಇವೆಲ್ಲ ದೂರು ನಿರಾಧಾರವೆಂದು ತೀರ್ಮಾನವಾಗುವ ಸಂಭವವಿದೆ ಎಂಬ ಯೋಚನೆಯೇ ನಿಮಗೆ ಬಾರದೆ? ಈ ಮಧ್ಯೆ ಶಿಕ್ಷಿತರಾದ ಕೆಲವರು, ಸಾಯದೆ ಬದುಕಿರುವ ಜನ ಕೊಡಬಹುದಾದ ಸಾಕ್ಷ್ಯ ಕೆಲವು ಮಟ್ಟಿಗೆ ಇಲ್ಲದಾಗದೆ?

ಭಾರತ ಸರಕಾರದ ಪರವಾಗಿ ಆಗ ಇದ್ದ ವೈಸರಾಯಿಗೂ ಕಾಂಗ್ರೆಸ್ಸಿನ ಪರವಾಗಿ ನನಗೂ ಮಾರ್ಚಿ ೫, ೧೯೩೧ರಲ್ಲಿ ಆದ ಒಪ್ಪಂದದಲ್ಲಿ ಶಾಸನೋಲ್ಲಂಘನದ ಸೂಚನೆ ಅಡಕವಾಗಿದೆ ಎಂದು ಮತ್ತೆ ಹೇಳುತ್ತೇನೆ. ಒಪ್ಪಂದದ ಯೋಚನೆ ಕೂಡ ಮೊಳೆಯುವ ಮೊದಲೆ ಕಾಂಗ್ರೆಸ್ ನಾಯಕರೂ ಬಂಧನ ಮುಕ್ತರಾಗಿದ್ದರು. ಕಾಂಗ್ರೆಸ್ಸಿನ ಕೆಲವರಿಗೆ ಸ್ವಲ್ಪಮಟ್ಟಿಗೆ ಪರಿಹಾರವೂ ಕೊಡಲ್ಪಟ್ಟಿತ್ತು. ಆ ಕರಾರುಗಳನ್ನು ಸರಕಾರ ಪೂರ್ಣವಾಗಿ ನಡೆಸಿಕೊಟ್ಟ ಮೇಲೆಯೇ ಶಾಸನಭಂಗ ಚಳುವಳಿಯನ್ನು ನಿಲ್ಲಿಸಿದ್ದು. ಶಾಸನೋಲ್ಲಂಘನ ತತ್ವದ ನ್ಯಾಯಬದ್ಧತೆಯನ್ನು ಅದರಿಂದ ಒಪ್ಪಿಕೊಂಡ ಹಾಗೆಯೇ ಆಯಿತು ಎಂದು ನನ್ನ ಅಭಿಪ್ರಾಯ. ಆದ್ದರಿಂದಲೇ "ಶಾಸನೋಲ್ಲಂಘನ ಯಾವ ಸಂದರ್ಭದಲ್ಲಿಯೂ ನ್ಯಾಯ ಸಮ್ಮತವೆಂದು ಒಪ್ಪಲು ಸಾಧ್ಯವಿಲ್ಲ" ಎಂದು

ಹೇಳುವುದು ಸ್ವಲ್ಪ ವಿಚಿತ್ರವಾಗಿದೆ. ಬ್ರಿಟಿಷ್ ಸರಕಾರವೇ 'ನಿಶ್ಶಸ್ತ್ರ ಪ್ರತೀಕಾರ'ವೆಂಬ ಹಸರಿನಲ್ಲಿ ಇವರ ನ್ಯಾಯಬದ್ಧತೆಯನ್ನು ಒಪ್ಪಿಕೊಂಡಿದೆಯಲ್ಲ. ಅದನ್ನು ಅಲಕ್ಷ್ಯಮಾಡಬೇಕೆ?

ಶುದ್ಧ ಅಹಿಂಸೆಯಲ್ಲಿ ನನಗಿರುವ ವಿಶ್ವಾಸವನ್ನು ನನ್ನ ಪತ್ರಗಳಲ್ಲಿ ತಿಳಿಸಿದೇನೆ. ನನ್ನ ಪತ್ರಗಳಲ್ಲಿ ಅದಕ್ಕೆ ಹೊಂದುವಂಥ ಯಾವುದೋ ಒಂದು ಅರ್ಥ ಹುಡುಕಿದೀರಿ. ನೀವು "ನನ್ನ ಅಭಿಪ್ರಾಯವನ್ನು ಒಪ್ಪಿಕೊಂಡರೆ ಶಾಂತಿ ವ್ಯವಸ್ಥೆಗಳನ್ನು ಕಾಪಾಡಬೇಕಾದ ಅಧಿಕೃತ ಸರಕಾರ ಹಿಂಸೆ, ಚಲನ ಸೌಕರ್ಯ ನಿರೋಧ ಪ್ರಯತ್ನ, ನಿರಪರಾಧಿಗಳ ಮೇಲೆ ದೌರ್ಜನ್ಯ, ಪೋಲೀಸ್ ಅಧಿಕಾರಿಗಳ ಹತ್ಯೆ ಮುಂತಾದವನ್ನು ನಿಗ್ರಹಿಸದೆ ಹಾಗೇ ಬಿಡಬೇಕೆಂದು ಅರ್ಥವಾದೀತು' ಎಂದು ಬರೆದೀರಿ. ಇಂಥ ಕೃತ್ಯಗಳಿಗೆಲ್ಲ ನ್ಯಾಯದ ಮುದ್ರೆ ಒತ್ತಿಕೊಡಿ ಎಂದು ನಾನು ಕೇಳಬಲ್ಲೆನೆಂದು ನೀವು ನಂಬಿದಂತೆ ಕಾಣುತ್ತದೆ. ಹಾಗಿದ್ದರೆ ನಿಮ್ಮ ಪಾಲಿಗೆ ನಾನೊಬ್ಬ ವಿಚಿತ್ರ ಸ್ನೇಹಿತನಾಗಿರಬೇಕು.

ನನ್ನ ತಲೆಗೆ ನೀವು ಕಟ್ಟಿರುವ ಅಭಿಪ್ರಾಯ, ಹೇಳಿಕೆಗಳಿಗೆ ವಿಸ್ತಾರವಾದ ಉತ್ತರವನ್ನು ಕೊಡಲು ನಾನಿಲ್ಲಿ ಪ್ರಯತ್ನಿಸಿಲ್ಲ. ಅಂಥ ಉತ್ತರಕ್ಕೆ ಇದು ಸ್ಥಳವೂ ಅಲ್ಲ. ಕೂಡಲೇ ಉತ್ತರಕೊಡಬೇಕಾದ ಕೆಲವು ಮಾತುಗಳನ್ನು ಮಾತ್ರ ಆರಿಸಿಕೊಂಡಿದೇನೆ.

ಈ ಅಗ್ನಿಪರೀಕ್ಷೆಯನ್ನು ತಪ್ಪಿಸಲು ನನಗೆ ಯಾವ ದಾರಿಯೂ ಇಲ್ಲದಂತೆ ನೀವು ಮಾಡಿದೀರಿ; ವಿಧಿಯಿಲ್ಲ. ಅತ್ಯಂತ ನಿರ್ಮಲ ಅಂತಃಕರಣದಿಂದ ೯ನೇ ತಾ॥ ಬೆಳಿಗ್ಗೆ ಈ ಅಗ್ನಿಪರೀಕ್ಷೆಯನ್ನು ಪ್ರಾರಂಭಿಸುತ್ತೇನೆ. 'ರಾಜಕೀಯ ಕುತಂತ್ರ' ಎಂದು ನೀವು ಹೇಳಿದರೂ ನ್ಯಾಯಕ್ಕಾಗಿ ಸರ್ವಶ್ರೇಷ್ಠ ನ್ಯಾಯವಿಧಾಯಕನಲ್ಲಿ ನಾ ಮಾಡಿದ ಪ್ರಾರ್ಥನೆ ಇದು. ನಿಮ್ಮಿಂದ ನನಗೆ ಆ ನ್ಯಾಯ ದೊರೆಯಲಿಲ್ಲ. ನಾನು ಆ ಪ್ರಯತ್ನದಲ್ಲಿ ಸೋತೆನೆನ್ನಬೇಕು. ಈ ಕಠಿಣ ಪರೀಕ್ಷೆಯಲ್ಲಿ ನಾ ಬದುಕದೆ ಸತ್ತೆನಾದರೆ ಪೂರ್ಣ ನಿರಪರಾಧಿ ನಾನು ಎಂಬ ದೃಢ ವಿಶ್ವಾಸದಿಂದ ಸಾವನ್ನಪ್ಪುತ್ತೇನೆ; ದೈವದ ತೀರ್ಮಾನ

ವನ್ನು ಇದಿರು ನೋಡುತ್ತೇನೆ. ಸರ್ವಶಕ್ತವಾದ ಸರಕಾರದ ಪ್ರತಿನಿಧಿ ನೀವು; ತನ್ನ ದೇಶಕ್ಕೂ ತನ್ಮೂಲಕ ಇಡೀ ಮಾನವ ಜಾತಿಗೂ ಸೇವೆ ಮಾಡಲು ಬಯಸಿದ ಒಬ್ಬ ಅಲ್ಪವ್ಯಕ್ತಿ ನಾನು. ನಮ್ಮಿಬ್ಬರ ನಡುವೆ ಯಾರು ಸರಿಯೋ ಯಾರು ತಪ್ಪೋ ಭವಿಷ್ಯ ತೀರ್ಮಾನ ಮಾಡೀತು.

ಹಿಂದಿನ ಪತ್ರ ಬರೆವಾಗ ನನಗೆ ಸಮಯ ಹೆಚ್ಚಾಗಿರಲಿಲ್ಲ. ಆದ್ದರಿಂದ ಅದರಲ್ಲೊಂದು ಮುಖ್ಯವಾಕ್ಯಬೃಂದವನ್ನು ಮರೆತ ಮಾತಾಗಿ ಬರೆಯಬೇಕಾಯಿತು. ಈಗ ಅದರ ಪ್ರತಿಯೊಂದನ್ನು ಮಹಾದೇವ ದೇಸಾಯಿಯ ತರುವಾಯ ಆತನ ಸ್ಥಳಕ್ಕೆ ಬಂದ ಪ್ಯಾರೇಲಾಲನಿಂದ ಟೈಪು ಮಾಡಿಸಿ ಕಳಿಸಿದೇನೆ. ಅದರಲ್ಲಿ ಆ ವಾಕ್ಯಬೃಂದ ಯಥಾ ಸ್ಥಳದಲ್ಲಿ ಸರಿಯಾಗಿ ಟೈಪು ಮಾಡಲಾಗಿದೆ.

ನಿಮ್ಮ ನಂಬಿಗೆಯ ಗೆಳೆಯ
ಮೋ. ಕ. ಗಾಂಧಿ

---

## ಉಪವಾಸ

ಫೆಬ್ರುವರಿ, ೮

ಶ್ರೀ ರಿಚರ್ಡ್‌,

ನಿಮ್ಮ ಪತ್ರವನ್ನು ತುಂಬಾ ಎಚ್ಚರಿಕೆಯಿಂದ ಓದಿದ್ದೇನೆ. ನನ್ನ—ವೈಸರಾಯರ ಪತ್ರವ್ಯವಹಾರದಲ್ಲಾಗಲಿ ನಿಮ್ಮ ಪತ್ರದಲ್ಲಾಗಲಿ ಉಪವಾಸವನ್ನು ಉಪಸಂಹರಿಸುವ ಅವಕಾಶ ಇದ್ದಂತೆ ನನಗೆ ಕಂಡಿಲ್ಲ; ವಿಷಾದದಿಂದ ಇದನ್ನು ಹೇಳುತ್ತೇನೆ. ವೈಸರಾಯಿಗೆ ನಾ ಬರೆದ ಪತ್ರಗಳಲ್ಲಿ ಈ ಹೆಜ್ಜೆ ಹಾಕದೆ ನಿಲ್ಲಿಸಲು ನನಗೆ ಹೇಗಾದರೆ ಸಾಧ್ಯ ಎಂಬುದನ್ನು ತಿಳಿಸಿದೇನೆ.

ನನ್ನ ಅನುಕೂಲಕ್ಕಾಗಿ ತಾತ್ಕಾಲಿಕ ವಿಮೋಚನೆ ಸಿಗುವುದಾದರೆ ನನಗದು ಬೇಡ. ಕೈದಿಯಂತೆ ಈ ಉಪವಾಸವನ್ನು ನಡೆಸುತ್ತೇನೆ. ನನಗಷ್ಟೇ ಸಾಕು. ಸರಕಾರದ ಅನುಕೂಲಕ್ಕೆ ತಕ್ಕಂತೆ ನಡೆಯಬೇಕೆಂದರೆ ನನಗದು ಸಾಧ್ಯವಿಲ್ಲ. ಮಾನವ ಪ್ರಯತ್ನಕ್ಕೆ ಸಾಧ್ಯವಿದ್ದಷ್ಟೂ ಸರಕಾರಕ್ಕೆ ಅನುಕೂಲವಾಗದಂತೆ ನಡೆದುಕೊಳ್ಳುತ್ತೇನೆ. ನಾನು ಕೈದಿ; ಬಲ್ಲೆ. ಉಪವಾಸ

ದಿಂದಲೇ ಆಗಬಹುದಾದ ತೊಂದರೆಗೆ ಉಪಾಯವಿಲ್ಲ. ಸ್ವತಂತ್ರನಂತೆ ನಾನೇನು ಉಪವಾಸವನ್ನು ಕೈಗೊಂಡಿಲ್ಲ. ಹಿಂದೆ ನಡೆದಂತೆ, ಈಗಲೂ ಕೆಲವು ಸಂದರ್ಭ ಒದಗಿಬಂದಾವು. ಸ್ವತಂತ್ರನಂತೆ ನಾನು ಉಪವಾಸ ಮಾಡಬಹುದಾದೀತು. ಬಂಧಮುಕ್ತನಾದರೆ ಈಗಾಗಿರುವ ಪತ್ರವ್ಯವಹಾರದ ಪ್ರಕಾರ ಉಪವಾಸ ನಡೆಯದು. ಪರಿಸ್ಥಿತಿಯನ್ನು ಮತ್ತೆ ವಿಮರ್ಶೆ ಮಾಡಿ ಕೊಂಡು ಹೊಸದಾಗಿ ನನ್ನ ಕರ್ತವ್ಯವನ್ನು ನಿರ್ಧರಿಸಬೇಕಾದಿಂತು.

ಕುಂಟುನೆಪ ಹೇಳಿ ಬಂಧನಮುಕ್ತಿ ಪಡೆಯುವ ಬಯಕೆ ನನಗಿಲ್ಲ. ನನ್ನ ವಿರುದ್ಧ ಎಷ್ಟೋ ಮಾತು ಬಂದಿದೆ. ಆದರೆ ಸತ್ಯ ಅಹಿಂಸೆಗಳ ವ್ರತಕ್ಕೆ ನಾ ತಪ್ಪಿ ನಡೆಯಲಾರೆ: ಕೇವಲ ಆ ವ್ರತವನ್ನು ನಂಬಿಯೇ ನಾನು ಬಾಳು ಸಾಗಿಸಿದೇನೆ. ಇಲ್ಲದಿದ್ದರೆ ಬಾಳು ಬಾಳಲ್ಲ. ನನ್ನ ಸಮಾಧಾನಕ್ಕಾಗಿಯೂ ಈ ಮಾತನ್ನು ಹೇಳಿಕೊಳ್ಳುತ್ತೇನೆ. ಈಗ ಮುತ್ತಿರುವ ಹಾಗೆ ಸುತ್ತಲೂ ಕತ್ತಲೆ ಕವಿದಾಗ ನನ್ನ ಅಚಲ ವಿಶ್ವಾಸವನ್ನು ಬಹಿರಂಗವಾಗಿ ಪ್ರಕಟಿಸುವುದು ನನಗೆ ಹಿತ; ನಾ ಬಲ್ಲೆ.

ಈ ಪತ್ರದ ವಿಷಯವಾಗಿ ಏನಾದರೊಂದು ಶೀಘ್ರ ತೀರ್ಮಾನ ಮಾಡು ವಂತೆ ಸರಕಾರವನ್ನು ನಾನು ಅವಸರಪಡಿಸಬಾರದು. ನಿಮ್ಮ ಪತ್ರವನ್ನು ಟೆಲಿ ಫೋನ್ ಮೂಲಕ ಹೇಳಿ ಬರೆಯಿಸಿದಿರಂತೆ, ಸರಕಾರಕ್ಕೆ ಸಾಕಷ್ಟು ಅವಕಾಶಕೊಡುವ ನಿಮಿತ್ತ ಬೇಕಾದರೆ ಬುಧವಾರದ ವರೆಗೆ (೧೦-೨-೪೩) ತಡೆಯುತ್ತೇನೆ.

ಈ ಸಂದರ್ಭದಲ್ಲಿ ಸರ್ಕಾರ ಪ್ರಕಟಿಸಿರುವ ಪತ್ರಿಕೆಯ ಪ್ರತಿಯೊಂದನ್ನು ನೀವು ದಯವಿಟ್ಟು ನನಗೆ ಕಳಿಸಿದೀರಿ: ಅದರ ಬಗ್ಗೆ ನನಗೆ ಯಾವ ಅಭಿ ಪ್ರಾಯವೂ ಇರಲಾರದು. ಏನಾದರೂ ಹೇಳಬಹುದಾದರೆ ಇಷ್ಟು ಹೇಳ ಬಲ್ಲೆ. ನನಗೆ ತುಂಬಾ ಅನ್ಯಾಯ ಮಾಡಿದೀರಿ. ಈ ಪತ್ರವ್ಯವಹಾರ ವನ್ನೆಲ್ಲಾ ಸಂಪೂರ್ಣವಾಗಿ ಪ್ರಕಟಿಸಿ, ಲೋಕ ತನ್ನ ತೀರ್ಮಾನ ತಾನೇ ಮಾಡಿಕೊಳ್ಳಲೆಂದು ಬಿಡುವುದು ಸರಿಯಾದ ದಾರಿ.

ನಿಮ್ಮ ನಂಬಿಕೆಯ ಗೆಳೆಯ
ಮೋ. ಕ. ಗಾಂಧೀ

---

# ಮಹಾಕ್ರಾಂತಿಯ ನಂತರ

೧ ನೇವೆಲ್ಲರಿಗೆ

೨ ಖಡಾಖಡಿ

೩ ವೈಸರಾಯರ ಉತ್ತರ

೪ ಕೊನೆಯ ಪತ್ರ

# ನೀವೆಲ್ಲರಿಗೆ

ನಿರ್ಬಂಧ ಶಿಬಿರ
ಫೆಬ್ರುವರಿ ೧೭, ೧೯೪೪

ಪ್ರೀತಿಯ ಗೆಳೆಯ,

ನಿಮ್ಮನ್ನು ನೋಡುವ ಭಾಗ್ಯ ನನಗಿರದಿದ್ದರೂ ; ಬೇಕೆಂದೇ ನಿಮ್ಮನ್ನು ಗೆಳೆಯ ಎಂದು ಕರೆಯುತ್ತಿದ್ದೇನೆ. ಬ್ರಿಟಿಷ್ ಸರಕಾರದವರು ನನ್ನನ್ನು ತಮ್ಮ ಘೋರ ಶತ್ರುವೆಂದೇ ತಿಳಿದಿದಾರೆ. ನಾನು ಇಡೀ ಮಾನವ ಜಾತಿಯ ಗೆಳೆಯ. ಈ ಗುಂಪಿನಲ್ಲಿ ಬ್ರಿಟಿಷರೂ ಸೇರಿದಾರೆ. ಎಂತಲೇ ನನ್ನ ಗೆಳೆತನದ ಗುರುತಾಗಿ ನಿಮ್ಮನ್ನು, ಭಾರತದಲ್ಲಿರುವ ಬ್ರಿಟಿಷರ ಪ್ರತಿನಿಧಿಯನ್ನು 'ಗೆಳೆಯ' ಎಂದ ಕರೆದಿದೇನೆ.

ಮೊಟ್ಟಮೊದಲು ಬಾರಿಗೆ ಸರಕಾರ ನನ್ನನ್ನು ಏಕೆ ಬಂಧಿಸಿತು ಎಂಬುವಕ್ಕೆ ಕಾರಣ ಕೊಟ್ಟು, ನನಗೆ ಅವರ ಆಪಾದನೆಯನ್ನು ಪ್ರತಿಶೋಧಿಸುವ ಅವಕಾಶ ಒದಗಿಸಿ ಕೊಟ್ಟಿದೆ; ಇನ್ನು ಕೆಲವರಿಗೆ ಇದೇ ನೋಟೀಸು ಜಾರಿಯಾಗಿದೆ. ನಾನು ಅದಕ್ಕೆ ಉತ್ತರ ಕೊಟ್ಟಿದ್ದೇನೆ. ಆದರೆ ಅದಕ್ಕೆ ಸರಕಾರದಿಂದ ಯಾವ ಪ್ರತ್ಯುತ್ತರವೂ ಇನ್ನೂ ಬಂದಿಲ್ಲ. ಹದಿಮೂರು ದಿನ ಕಾದು ಇನ್ನೊಂದು ನೆನಪಿನ ಕಾಗದ ಕೂಡಾ ಬರೆದಿದೇನೆ.

ಸರಕಾರ ಈ ನೋಟೀಸು, ಕೊಟ್ಟಿರುವುದು ಇಲ್ಲಿರುವ ಆರು ಜನರಲ್ಲಿ ಮೂರೇ ಜನಕ್ಕೆ; ಎಂತಲೇ ಕೆಲವರಿಗೆ ಮಾತ್ರ ಜಾರಿಯಾಗಿದೆ ಎಂದದ್ದು. ಇಷ್ಟರಲ್ಲೇ ಉಳಿದವರಿಗೂ ನೋಟೀಸು ಬರಬಹುದು ಎಂತ ಅಂದುಕೊಂಡಿದ್ದೇನೆ. ಈ ನೋಟೀಸು ಕಳಿಸಿರುವುದು ನ್ಯಾಯದಾನದ ಅಭಿಲಾಷೆಯಿಂದಲ್ಲ, ಬರೀ ಸಂಪ್ರದಾಯಕ್ಕಾಗೇ ಇರಬಹುದು. ನನಗೇನೋ ಸಂಶಯವೇ. ವಾದವಿವಾದದಿಂದ ಈ ಕಾಗದ ತುಂಬುವ ಇಷ್ಟ ನನಗಿಲ್ಲ. ನಿಮ್ಮ ಹಿಂದಿನವ

ರಿಗೆ ಬರೆದದ್ದನ್ನೇ ಮತ್ತೊಮ್ಮೆ ಹೇಳುತ್ತೇನೆ: ನಾನಾಗಲಿ, ಕಾಂಗ್ರೆಸ್ ಆಗಲಿ, ನಮ್ಮ ಮೇಲೆ ಹೇರಿರುವ ಅಪವಾದಗಳಿಗೆ ಜವಾಬ್ದಾರರಿಲ್ಲ; ನಾವು ನಿರ್ದೋಷಿ,ಗಳು, ಒಂದು ನಿಷ್ಪಕ್ಷಪಾತಿಯಾದ ವಿಚಾರಣಾಸಮಿತಿ ನಮ್ಮಿಬ್ಬರಲ್ಲಾದ ವಿವಾದವನ್ನು ಪರಿಶೀಲಿಸಿ ತೀರ್ಪು ಹೇಳುವವರೆಗೂ ಸತ್ಯ ಹೊರಬೀಳುವುದಿಲ್ಲ.

ನಮ್ಮನ್ನು ಬಿಡುಗಡೆ ಮಾಡುವ ಸೂಚನೆಯ ಬಗ್ಗೆ ಅಸೆಂಬ್ಲಿಯಲ್ಲಾದ ಭಾಷಣ ಸರೋಜಿನಿದೇವಿಗೆ ದಿಗ್ಬಂಧನ: ಇವೆಲ್ಲಾ ಬೆಂಕಿಯೊಡನೆ ಆಟ ಆಡಿದ ಹಾಗೆ. ಜಪಾನರ ಸೋಲು, ಮಿತ್ರರ ವಿಜಯ ಎರಡೂ ಒಂದೇ ಅಲ್ಲ; ಬೇರೆ ಬೇರೆ ಮಿತ್ರರ ಗೆಲುವೆಂದರೆ ಭಾರತದ ಬಂಧವಿಮೋಚನೆ ಎಂತಲೇ ನಾನು ಅರ್ಥ ಮಾಡಿಕೊಂಡಿದ್ದೇನೆ. ಹಿಂದೂಸ್ಥಾನಕ್ಕೆ, ಬ್ರಿಟಿಷರದಾಗಲಿ ಜಪಾನರ ದಾಗಲಿ, ಯಾರ ದಾಸ್ಯವೂ ಬೇಕಾಗಿಲ್ಲ. ಕಾಂಗ್ರೆಸು ಈ ಮನೋಭಾವದ ಪ್ರತೀಕ. ಜನರ ಮನದಲ್ಲಿ ಕಾಂಗ್ರೆಸ್ ಆಳವಾಗಿ ಬೇರೂರಿದೆ. ಎಂತಲೇ ಬ್ರಿಟಿಷರು ಇದ್ದದ್ದರಲ್ಲೇ ತೃಪ್ತರಾದದ್ದನ್ನು ಕಂಡು ಬೆಚ್ಚಿಬಿದ್ದೆ. 'ಭಾರತ ದಿಂದ ಧನ, ಜನ ಎರಡೂ ಸಹಾಯ ಆಗಲಿಲ್ಲವೇ ? ಸರಕಾರ ಯಂತ್ರ ಸಲೀ ಸಾಗಿ ಚಲಿಸುತ್ತಿಲ್ಲವೇ ? ಅಷ್ಟೆ ಸಾಕು ! ಎಂಬ ನಿಮ್ಮ ತೃಪ್ತಿ ಬ್ರಿಟನ್ನಿಗೆ, ಭಾರತಕ್ಕೆ ಇಡೀ ಜಗತ್ತಿಗೇ ಅಶುಭಕಾರಕವಾದ್ದು. ನಿಮ್ಮ ಆತ್ಮವನ್ನೇ ನೀವು ಪ್ರಶ್ನಿಸಿಕೊಳ್ಳದೆ ಹೋದರೆ ಎಲ್ಲರಿಗೂ ಕೇಡು ಕಟ್ಟಿಟ್ಟದ್ದು.

ಜಗತ್ತಿನ ಜನಾಂಗಗಳೆಲ್ಲಾ ಸಾವು ಬದುಕಿನ ಹೋರಾಟದಲ್ಲಿ ತೊಡ ಗಿರುವಾಗ, ಇಡೀ ಪ್ರಪಂಚದ ಭವಿಷ್ಯ ತೂಗಾಡುತ್ತಿರುವಾಗ, ನಾಳೆಯ ವಾಗ್ದಾನಗಳೆಲ್ಲಾ ಬರೀ ಜೊಳ್ಳು. ಈ ಯುದ್ಧ ಜಗಚ್ಛಾಂತಿಯಲ್ಲಿ ಮುಕ್ತಾಯವಾಗಬೇಕೆಂದರೆ, ಈ ಪಿಶಾಚ ಯುದ್ಧ ಇನ್ನೊಂದು ಮಹಾ ಪಿಶಾಚ ಯುದ್ಧಕ್ಕೆ—ಅರ್ಥದೂ ಇದ್ದರೆ—ಮುನ್ನುಡಿಯಾಗಬಾರದೆಂದರೆ, ಮಾತಿಗಿಂತ ಕೃತಿಯೇ ಅಗತ್ಯ ಈ ಹೊತ್ತು. ಭಾರತದ ಬಂಧವಿಮೋಚನೆ ನಿಜವಾದ ಯುದ್ಧ ಪ್ರಯತ್ನ. 'ಭಾರತವನ್ನು ಬಿಟ್ಟು ಹೊರಡಿ' ಎಂಬುದಕ್ಕೆ ಇದೇ ಅರ್ಥ. ಸರಕಾರ ಮನಸಾ ಇಚ್ಛೆಮಾಡಿದ ವಿಷಾರ್ಥವಲ್ಲ. ಅದರಲ್ಲಿ ಅಡಗಿರುವುದು ಹಗೆತನವಲ್ಲ; ತುಂಬು ಹೃದಯದ ಸ್ನೇಹ ಬ್ರಿಟನ್ನಿನ ಬಗ್ಗೆ, ಇಡೀ ಮಾನವ ಕೋಟಿಯ ಬಗ್ಗೆ.

ನಾನು ಬ್ರಿಟಿಷರ ಗೆಳೆಯ. ನಿಮ್ಮ ಹಿತದಲ್ಲಿ ನನಗೂ ಆಸಕ್ತಿ ಇದೆ. ಎಂತಲೇ ಯೋಚಿಸಿ ಕೆಲಸ ಮಾಡಿದ್ದೇನೆ. ಹೊರಗಡೆ ಕೋಟಿ ಜನ ಹಸಿದು ಸಾಯುತ್ತಿರುವಾಗ ನಾನೊಬ್ಬನು ಮಾತ್ರ ಸ್ವಲ್ಪವೂ ಕಷ್ಟಪಡದೆ, ಎಲ್ಲ ಸುಖ ಭೋಗಗಳನ್ನು ಅನುಭವಿಸುತ್ತಾ ಈ ಸೆರೆಯಲ್ಲಿ ವಾಸಿಸುತ್ತಿರುವುದರಿಂದ ನನಗೆ ಏನೇನೂ ಸಂತೋಷವಿಲ್ಲ. ಆದರೂ ಬಾಳಿಗೆ ಅತ್ಯಗತ್ಯವಾದ ಆಹಾರ-ಸ್ವಾತಂತ್ರ್ಯ-ಇಲ್ಲದೆಯೇ ಹೊರಗೆ ಬಂದರೇ ನಾನು ತೀರಾ ಅಸಹಾಯಕನಾಗಿ ಹೋದೇನು ಅಷ್ಟೆ.

ನಿಮ್ಮ ವಿಶ್ವಾಸಿಕ

ಮೋ. ಕ. ಗಾಂಧೀ

---

೩೩೩೩

ನಿರ್ಬಂಧ ಶಿಬಿರ

ಮಾರ್ಚ ೯, ೧೯೪೪

## ಕಸ್ತೂರಿಬಾ

ಪ್ರೀತಿಯ ಗೆಳೆಯ,

ನನ್ನ ಫೆಬ್ರುವರಿ ೧೭ರ ಕಾಗದಕ್ಕೆ ಕೂಡಲೇ ಪ್ರತ್ಯುತ್ತರ ಕೊಟ್ಟದ್ದಕ್ಕೆ ವಂದನೆಗಳು. ನನ್ನ ಪತ್ನಿಯ ಮರಣದ ಬಗ್ಗೆ ಸಹಾನುಭೂತಿ ತೋರಿದ್ದಕ್ಕಾಗಿ ನಿಮಗೂ ಲೇಡಿ ವೇವೆಲ್ಲರಿಗೂ ನಾನು ಕೃತಜ್ಞ. ಈ ಜೀವಂತ ನರಕದಲ್ಲಿರುವದಕ್ಕಿಂತ ಬೇಗ ಸಾವು ಬರಲೆಂದು ಆಕೆಗಾಗೇ ನಾನು ಆಕೆಯ ಸಾವನ್ನು ಸ್ವಾಗತಿಸಿದ್ದರೂ ಆಕೆಯ ಮರಣದಿಂದ ನನಗೆ ತುಂಬಾ ವ್ಯಥೆಯಾಗಿದೆ; ಆಗಬಾರದಷ್ಟು ವ್ಯಥೆಯಾಗಿದೆ. ಎಲ್ಲರಂತಿರಲಿಲ್ಲ ನಮ್ಮ ದಾಂಪತ್ಯಜೀವನ. ೧೯೦೬ರಲ್ಲಿ ನಾವಿಬ್ಬರೂ ಮಾತಾಡಿಕೊಂಡು, ನಮಗರಿವಾಗುವಂತೆಯೇ ಪ್ರಯತ್ನಪಟ್ಟು, ಇಂದ್ರಿಯ ನಿಗ್ರಹವನ್ನೇ ಬದುಕಿನ ನೀತಿಯಾಗಿ ಮಾಡಿಕೊಂಡೆವು. ಇದರಿಂದ ಹಿಂದೆಂದೂ ಇರದಷ್ಟು ಗಟ್ಟಿಯಾಗಿ

ನಮ್ಮಿಬ್ಬರ ಎದೆಗಳೂ ಹೊಸೆದುಕೊಂಡವು. ನಾನು ಬಯಸದೆಯೇ ನಾವಿಬ್ಬರೂ ಏಕಜೀವವಾಗಿ ಹೋದೆವು. ಆಕೆ ಮನಸಾರೆ ತನ್ನ ಬಾಳನ್ನು ನನ್ನ ಬಾಳಿನಲ್ಲಿ ಬೆರೆಸಿಬಿಟ್ಟಳು. ಇದರ ಪರಿಣಾಮ ಆಕೆ ನಿಜವಾಗಿಯೂ ನನ್ನ ಅರ್ಧಾಂಗಿಯಾದದ್ದೇ. ಆಕೆಯದು ತುಂಬಾ ದೃಢವಾದ ಮನಸ್ಸು. ಮೊದಮೊದಲು ನಾನಿದನ್ನು ಮೊಂಡತನ, ಹಟಮಾರಿತನ ಎಂದುಕೊಂಡಿದ್ದೆ. ಆ ದೃಢಮನಸ್ಸಿನಿಂದಾಗಿ ಆಕೆಗೆ ಅರ್ಥವಾಗದಂತೆಯೆ ಆಕೆ ಅಹಿಂಸಾತ್ಮಕ ಅಸಹಕಾರದ ಕಲೆಯ ಪ್ರಯೋಗದಲ್ಲಿ ನನ್ನ ಗುರುವಾಗಿ ಹೋದಳು. ಅದು ನನ್ನ ಮನೆಯಲ್ಲೇ ಮೊದಲು ಆಚರಣೆಗೆ ಬಂತು. ೧೯೦೬ರಲ್ಲಿ ನಾನು ಅದನ್ನು ಮೊಟ್ಟಮೊದಲ ಬಾರಿಗೆ ರಾಜಕೀಯ ರಂಗದಲ್ಲಿ ಪ್ರಯೋಗಿಸಿದಾಗ ಅದಕ್ಕೆ ಸತ್ಯಾಗ್ರಹ ಎಂದು ನಿರ್ದಿಷ್ಟವಾಗಿ ನಾಮಕರಣವಾಯಿತು. ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ದಸ್ತಗಿರಿಯ ಮೆರವಣಿಗೆ ಆರಂಭವಾದಾಗ ಕಸ್ತೂರಿ ಬಾ ಕೂಡಾ ಸತ್ಯಾಗ್ರಹಿಯಾಗಿದ್ದಳು. ನನಗಿಂತ ಹೆಚ್ಚು ಕಾಯಕಷ್ಟ ಅನುಭವಿಸಿದಳು. ಎಷ್ಟೋ ಸಲ ಸೆರೆಮನೆಯ ವಾಸಮಾಡಿ ಮೈ ಒಗ್ಗಿದ್ದರೂ, ಈ ಬಾರಿ ಎಲ್ಲಾ ಅನುಕೂಲಗಳಿದ್ದರೂ, ಈ ಸಲದ ಸೆರೆಮನೆಯ ವಾಸ ಆಕೆಗೆ ಒಗ್ಗಲಿಲ್ಲ. ನನ್ನ ದಸ್ತಗಿರಿ, ಅದರ ಹಿಂದೆ ಇತರರ ಬಂಧನ, ಅದಾಗುತ್ತಿದ್ದ ಹಾಗೇ ತನ್ನ ಬಂಧನ ಇದರಿಂದ ಆಕೆ ತುಂಬಾ ಹೆದರಿದಳು, ಮನಸ್ಸು ಕಹಿಯಾಯಿತು. ನನ್ನ ಬಂಧನವಾದೀತೆಂದು ಆಕೆ ಕನಸು ಮನಸಿನಲ್ಲಿ ಕೂಡಾ ನೆನಸಿರಲಿಲ್ಲ. ಸರಕಾರಕ್ಕೆ ನನ್ನ ಅಹಿಂಸೆಯಲ್ಲಿ ನಂಬಿಕೆಯಿದೆ; ನಾನಾಗಿಯೇ ಬಯಸದೆ ನನ್ನ ದಸ್ತಗಿರಿಯಾಗುವುದಿಲ್ಲ ಎಂತ ನಾನೇ ಆಕೆಯನ್ನು ನಂಬಿಸಿದ್ದೆ. ಆದರೂ ನನ್ನ ಬಂಧನವಾದದ್ದು ಆಕೆಯ ಎದೆಗೆ ಬಲವಾದ ಆಘಾತವಾಯಿತು; ಅದನ್ನು ಆಕೆ ತಾಳಲಾರದೆ ಹೋದಳು. ಸೆರೆಗೆ ಬರುತ್ತಿದ್ದ ಹಾಗೇ ತೀಕ್ಷ್ಣ ವಿರೇಚನ ಬಾಧೆಯಿಂದ ಹಾಸಿಗೆ ಹಿಡಿದಳು. ಆಕೆಯ ಜೊತೆಗೇ ದಸ್ತಗಿರಿಯಾದ ಡಾ॥ ಸುಶೀಲಾ ನಾಯರಳ ಉಪಚಾರ ಇಲ್ಲದೆ ಇದ್ದಿದ್ದರೆ, ಈ ನಿರ್ಬಂಧ ಶಿಬಿರಕ್ಕೆ ಬಂದು ನನ್ನನ್ನು ನೋಡುವ ಮುಂಚೆಯೇ ಕಣ್ಣು ಮುಚ್ಚಬೇಕಾಗಿತ್ತು. ಇಲ್ಲಿಗೆ ಬಂದು ನನ್ನನ್ನು ನೋಡಿದ ಮೇಲೆ ಆಕೆಯ ಮನಸ್ಸಿಗೆ ಸಮಾಧಾನವಾಯಿತು; ಔಷಧವಿಲ್ಲದೆಯೇ ರೋಗ ಓಡಿಹೋಯಿತು. ಆದರೆ ದುರ್ಬಲತೆ ಹೆಚ್ಚಾಗಿ ದಿನದಿನಕ್ಕೆ ಆಕೆಯ ಮೈ ಸವೆಯುತ್ತ ಬಂತು.

ನನ್ನ ಪಾಲಿಗೆ ಬಾ ಅಮೂಲ್ಯ ಜೀವರತ್ನ. ಆಕೆಯ ವಿಚಾರವಾಗಿ ಸರಕಾರ ಪ್ರಕಟಿಸಿದ ಪ್ರಕಟನೆ ಸತ್ಯದೂರವಾದದ್ದು. ಮೇಲೆ ಹೇಳಿದ್ದನ್ನು ಅರ್ಥವಾಡಿಕೊಂಡರೆ ಸರಕಾರದ ಪ್ರಕಟನೆಯನ್ನು ಓದಿ ನನಗೆ ಎಷ್ಟು ದುಃಖ ವಾಗಿರಬೇಕೆಂದು ಅರ್ಥವಾಗಬಹುದು. ಈ ವಿಷಯದಲ್ಲಿ ನಾನು ಭಾರತ ಸರಕಾರದ ಗೃಹಶಾಖೆಯ ಕಾರ್ಯದರ್ಶಿಗೆ ಬರೆದ ತಕರಾರನ್ನು ದಯವಿಟ್ಟು ತರಿಸಿ ಓದಿನೋಡಿ. ಸತ್ಯವೇ ಯುದ್ಧದಲ್ಲಿ ಪ್ರಥಮಾಹುತಿಯಂತೆ. ಈ ಯುದ್ಧದಲ್ಲಿ ಮಿತ್ರರಾಷ್ಟ್ರಗಳ ವಿಚಾರದಲ್ಲಾದರೂ ಹಾಗಾಗಬಾರದೆಂತ ನನಗೆ ಎಷ್ಟೋ ಆಸೆಯಿದೆ.

ಇನ್ನು ನೀವು ಪ್ರೀತಿಯಿಂದ ಕಳಿಸಿರುವ ನಿಮ್ಮ ಭಾಷಣದ ವಿಚಾರ: ಪತ್ರಿಕೆಗಳಲ್ಲಿ ನಿಮ್ಮ ಭಾಷಣದ ವರದಿ ಬಂದಾಗ ನಾನು ಬಾನ ಸೇವೆಯಲ್ಲಿದ್ದೆ. ಅಸೋಸಿಯೇಟೆಡ್ ಪ್ರೆಸ್ ವರದಿಯನ್ನು ಮೀರಾಬಾಯಿಯಿಂದ ಓದಿಸಿ ಕೇಳಿದೆ, ಮನಸ್ಸು ಮಾತ್ರ ಎತ್ತಲೋ ಇತ್ತು. ಎಂತಲೇ ನೀವು ಕಳಿಸಿದ ಭಾಷಣದ ಪ್ರತಿಯಿಂದ ತುಂಬಾ ಅನುಕೂಲವಾಯಿತು. ಈಗ ಎಚ್ಚರವಿಟ್ಟು ಓದಿ ನೋಡಿದೇನೆ. ಓದಿದ ಮೇಲೆ, ಅದರಲ್ಲೂ ನೀವು "ಇದೇ ನನ್ನ ಕಡೆಯ ಮಾತೆಂದು ತಿಳಿಯಬಾರದು" ಎಂದು ಹೇಳಿರುವುದನ್ನು ಓದಿದ ಮೇಲೆ, ಒಂದೆರಡು ಮಾತು ಹೇಳಬೇಕೆಂತ ಆಸೆಯಾಗುತ್ತಿದೆ. ಈ ಕಾಗದ ನಿಮ್ಮ ಅಭಿಪ್ರಾಯಗಳಲ್ಲಿ ಕೆಲವನ್ನಾದರೂ ಬದಲಾಯಿಸಲು ಕಾರಣವಾದೀತೆಂದು ನಾನು ನಂಬುತ್ತೇನೆ.

ನಿಮ್ಮ ಭಾಷಣದ ಎರಡನೇ ಪುಟದ ಮಧ್ಯಭಾಗದಲ್ಲಿ 'ಭಾರತದ ಜನ'ದ ಕ್ಷೇಮದ ವಿಚಾರ ಹೇಳಿದೀರಿ. ವೈಸ್ರಾಯಿ ಪ್ರಕಟನೆಗಳಲ್ಲಿ ಭಾರತೀಯರು ಭಾರತದ ಜನಾಂಗಗಳು ಎಂದು ಇಬ್ಬಗೆ ಮಾತನ್ನೂ ನಾ ನೋಡಿದೇನೆ. ಈ ಎರಡು ಮಾತಿನ ಅರ್ಥ ಒಂದೇ ಏನು?

೧೩ನೇ ಪುಟದಲ್ಲಿ ಭಾರತ ಸ್ವಯಂಪ್ರಭುತ್ವಾಧಿಕಾರ ಪಡೆವ ಬಗ್ಗೆ ಮಾತಾಡುತ್ತ 'ಅದೇ ಬ್ರಿಟಿಷರ ನಿಜವಾದ ಬಯಕೆ ಎಂದು ನನಗೆ ದೃಢವಾಗಿ ನಂಬಿಕೆಯಾಗಿದೆ. ಅದನ್ನು ಆದಷ್ಟು ಬೇಗ ಸಫಲಗೊಳಿಸುವ ಆಸೆಯೂ ಇದೆ. ಆದರೆ ಸದ್ಯಕ್ಕೆ ಆದಷ್ಟು ಬೇಗ ಈಗ ಜಪಾನ್ ಜರ್ಮನಿಗಳನ್ನು ಸೋಲಿಸುವ ಕಾರ್ಯದಲ್ಲಿ ಯಾವುದೂ ತಡೆಯಾಗಬಾರದೆಂಬ ಉದ್ದೇಶದಿಂದ

ಈ ಯುದ್ಧದಲ್ಲೇನು, ಯಾವಾಗಲೂ ನಮಗೆ ನಿಷ್ಠರಾಗಿ ನಡೆದುಕೊಂಡವರಿಗೆ ನಮ್ಮಿಬ್ಬರಿಗಾಗಿಯೂ ಹೋರಾಡುತ್ತಿರುವ ಸಿಪಾಯಿಗಳು, ನಮ್ಮ ಜೊತೆಗೆ ದುಡಿದವರು, ಯಾರ ಕ್ಷೇಮದ ಬಗ್ಗೆ ನಾವು ವಚನಕೊಟ್ಟದೇವೋ ಆ ಅರಸರೂ ಅವರ ಪ್ರಜೆಗಳೂ, ತಮಗೆ ನ್ಯಾಯ ದೊರಕಿಸಿ ಕೊಡಲು ನಮ್ಮನ್ನೇ ನಂಬಿದ ಅಲ್ಪಸಂಖ್ಯಾಕರೂ ಮೊದಲಾದವರಿಗೆ ಈ ಆಡಳಿತ ಸಮಸ್ಯೆಯ ಪರಿಹಾರದಿಂದ ಅನನುಕೂಲವಾಗಬಾರದೆಂಬ ಕಾರಣದಿಂದ ನಮ್ಮ ಬಯಕೆ ಫಲಿಸುವ ದಿನ ದೂರವಾಗಿದೆ. "

ಇದನ್ನು ಸಕಾರಣವಾಗಿ ಚರ್ಚಿಸದೆ, ನನ್ನ ಮಾತಿನಲ್ಲಿ ನಿಮ್ಮ ಮಾತಿನ ಸಾರಾಂಶ ಹೇಳಿಬಿಡುತ್ತೇನೆ. ನಾವು ಬ್ರಿಟಿಷರು-ನಾವೇ ತಯಾರಿಸಿ ಹಿಂದುಸ್ಥಾನದಲ್ಲಿ ನಮ್ಮ ಆಡಳಿತವನ್ನು ನೆಲೆಗೊಳಿಸಲು ತರಬೇತುಮಾಡಿದ, ಬೇರೆ ಜನಾಂಗಗಳ ಮೇಲೆ ನಾವು ಹೂಡಿದ ಯುದ್ಧದಲ್ಲಿ ಪರಿಣಾಮಕರವಾಗಿ ಸಹಾಯ ಮಾಡಬಲ್ಲರೆಂದು ಅನುಭವದಿಂದ ಗೊತ್ತಾದ ಹಿಂದೀ ಸೈನಿಕರನ್ನು ಏನಾದರೂ 'ಕೈ ಬಿಡುವುದಿಲ್ಲ. ನಮ್ಮಿಂದಲೇ ಸೃಷ್ಟಿತರಾಗಿ, ನಮ್ಮಿಂದಲೇ ಇಂದಿನ ಸ್ಥಿತಿಯಲ್ಲಿರುವ ಈ ಅರಸರು, ತಮ್ಮ ಪ್ರಜೆಗಳ ಆತ್ಮವನ್ನು ತುಳಿದರೂ ಸರಿಯೇ ಇವರ ಕೈ ಬಿಡುವುದಿಲ್ಲ; ನಮ್ಮಿಂದ ಪ್ರೋತ್ಸಾಹ ಪಡೆಯುತ್ತಾ ಬಹುಸಂಖ್ಯಾಕರು ನಮ್ಮನ್ನು ವಿರೋಧಿಸಿದಾಗ ನಮಗೆ ನೆರವಾಗುವ ಚಿಕ್ಕ ಗುಂಪುಗಳನ್ನು ಕೈಬಿಡುವುದಿಲ್ಲ. ನಮ್ಮ ಬದಲಾಗಿ, ಬಹುಮತ ಪಕ್ಷದವರು ಇಡೀ ಭಾರತದ ಜನತೆ ಆರಿಸಿದ ಪ್ರತಿನಿಧಿಗಳ ಸರಕಾರವನ್ನು ಸ್ಥಾಪಿಸುತ್ತೇವೆ ಎಂದರೆ ತಾನೇ ಏನು ? ಹಿಂದುಗಳೂ ಮುಸ್ಲಿಮರು ತಮ್ಮಲ್ಲಿ ಒಂದು ಒಪ್ಪಂದ ಮಾಡಿಕೊಂಡು ನಮ್ಮ ಬಳಿಗೆ ಬರುವವರೆಗೂ ನಾವು ಭಾರತೀಯರಿಗೆ ಆಡಳಿತ ಒಪ್ಪಿಸುವುದಿಲ್ಲ." ನಾನು ಉದಾಹರಿಸಿದ ನಿಮ್ಮ ಮಾತು, ಅದಕ್ಕೆ ನನ್ನ ಅರ್ಥ, ಎರಡೂ ಹೊಸದಲ್ಲ. ಇದರಿಂದ ನನಗೆ ಪರಿಸ್ಥಿತಿ ತುಂಬಾ ನಿರಾಶಾದಾಯಕವಾಗಿ ತೋರುತ್ತದೆ. ಇದು ನನ್ನ ಒಬ್ಬನದೇ ಭಾವನೆಯಲ್ಲ; ಎಲ್ಲರದೂ. ಈ ನಿರಾಶೆಯ ಕಾತರದಲ್ಲಿ ಮೂಡಿದ ಕೂಗು—'ಭಾರತವನ್ನು ಬಿಟ್ಟು ಹೊರಡಿ.' ದೇಶದಲ್ಲಿ ಇಂದಾಗುತ್ತಿರುವ ದಿನದಿನದ ಘಟನೆಗಳು 'ಭಾರತವನ್ನು ಬಿಟ್ಟು ಹೊರಡಿ' ಎಂಬ ಸೂತ್ರಕ್ಕೆ ನಾನು ಬರೆದ ವಿವರಣೆಯ ಸತ್ಯವನ್ನೇ ಎತ್ತಿ ತೋರಿಸುತ್ತವೆ; ಪ್ರಮಾಣಮಾಡಿ ಕೊಟ್ಟಿವೆ.

ನಿಮ್ಮ ಭಾಷಣವನ್ನೋದಿದರೆ 'ಭಾರತ ಬಿಟ್ಟು ಹೊರಡಿ' ಎಂಬ ಸೂತ್ರ ತಯಾರಿಸಿದವರನ್ನು ಸಮಾಜ ಬಹಿಷ್ಕೃತರಂತೆ ಕಾಣಬೇಕು ಎಂಬ ಆಸೆ ನಿಮಗಿಲ್ಲವೆಂದು ಗೊತ್ತಾಗುತ್ತದೆ. ಅಲ್ಲವೆ ಅವರೆಲ್ಲಾ ಉದಾತ್ತ ಮಾನಸರೆಂದೂ ನಿಮಗೆ ನಂಬಿಕೆಯಿದೆ. ಅಂದ ಮೇಲೆ ಅವರನ್ನು ಹಾಗೆ ಕಂಡು, ಅವರ ಸೂತ್ರಕ್ಕೆ ಅವರೇ ಕೊಟ್ಟ ವಿವರಣೆಯನ್ನು ಒಪ್ಪಿಕೊಳ್ಳಿ. ಆಗ ನಿಮ್ಮ ದಾರಿ ತಪ್ಪುವುದಿಲ್ಲ.

ಕ್ರಿಪ್ಸ ಯೋಜನೆಯನ್ನು ಬೆಳೆಸಿ ಹೇಳುತ್ತಾ ೧೬ನೆ ಪುಟದ ನಡುವೆ "...ಅವರು ಸಹಕಾರದ ಮನೋಭಾವ ತೋರುವವರೆಗೂ ಆ ನಾಯಕರ ಬಿಡುಗಡೆಯ ಮಾತಾಡುವುದು ವ್ಯರ್ಥ. 'ಭಾರತವನ್ನು ಬಿಟ್ಟು ತೊಲಗಿ' ಎಂಬ ನಿರ್ಣಯಕ್ಕೂ ಮಹಾ ದುರಂತ ಘಟನೆಗಳಿಗೂ ಕಾರಣವಾದ ನೀತಿಯನ್ನು ಬದಲಾಯಿಸಲು ಸರಿಯಲ್ಲಿರುವ ನಾಯಕರು ಯಾರ ಸಲಹೆ ಕೇಳುವುದೂ ಅಗತ್ಯವಿಲ್ಲ; ತಮ್ಮ ಆತ್ಮವನ್ನೆ ಕೇಳಿಕೊಳ್ಳಲಿ" ಎಂತ ಹೇಳಿದೀರಿ. ೧೯, ೨೦ನೆ ಪುಟಗಳಲ್ಲಿ ಮತ್ತೆ ಈ ವಿಚಾರವೆತ್ತಿ, "ಒಂದು ಮುಖ್ಯಪಕ್ಷ ಹೊರ ನಿಂತಿದೆ; ಅದಕ್ಕೆ ಎಷ್ಟು ಸಾಮರ್ಥ್ಯವಿದೆಯೊ, ಅದರ ವಿಚಾರಶಕ್ತಿ ಎಷ್ಟು ಹಿರಿದಾದುದೋ ನಾ ಬಲ್ಲೆ; ಆದರೆ ನಾನು ಸದ್ಯದ ಉಪಯೋಗಕ್ಕೆ ಬಾರದ ಅದರ ಬಂಜೆನೀತಿಯನ್ನು ಒಪ್ಪುವುದಿಲ್ಲ. ಹಿಂದುಸ್ತಾನದ ಇಂದಿನ ಮತ್ತು ಮುಂದಿನ ಸಮಸ್ಯೆಗಳ ಪರಿಹಾರದಲ್ಲಿ ಇವರ ಸಹಕಾರ ಪಡೆಯ್ರ ಬೇಕೆಂಬ ಆಶೆ ನನಗಿದೆ. ಈಗಿನ ಹಿಂದುಸ್ಥಾನದ ಸರಕಾರದಲ್ಲಿ ಭಾಗವಹಿಸ್ರು ವುದು ಇವರಿಗೆ ಸಾಧ್ಯವಿಲ್ಲವಾದರೆ, ಭವಿಷ್ಯದ ಸಮಸ್ಯೆಗಳನ್ನು ವಿಚಾರಿಸ್ರುವ ಕೆಲಸದಲ್ಲಾದರೂ ನೆರವಾಗಬಹುದೇ. ಆದರೆ ಅಸಹಕಾರಕ್ಕೂ ತಡೆಗಟ್ಟುವ ನೀತಿಯನ್ನೂ—ಧರ್ಮಕ್ಕೆಂಬಂತಲ್ಲ—ಅದರಿಂದ ಯಾರಿಗೂ ಸಹಾಯವಾಗದು, ಅದು ನಷ್ಟಕರವಾದ ತಪ್ಪುದಾರಿ ಎಂದು ಒಪ್ಪಿ ಬದಲಾಯಿಸುವವರೆಗೂ, ೧೯೪೨ ಆಗಸ್ಟ್ ೮ರ ನಿರ್ಣಯಕ್ಕೆ ಕಾರಣರಾದವರನ್ನು ಬಿಡುಗಡೆ ಮಾಡಲು ಯಾವ ಕಾರಣವೂ ಇಲ್ಲ" ಎಂದಿದೀರಿ.

ನಿಮ್ಮಂಥ ರಾಜಕಾರಣಿ, ಸೈನ್ಯಶಾಸ್ತ್ರ ವಿಶಾರದ ಇಂಥ ಅಭಿಪ್ರಾಯ ಇಟ್ಟುಕೊಂಡಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ನೂರಾರು ಜನ ಸ್ತ್ರೀ ಪುರುಷರು ಕೂತು ಚರ್ಚಿಸಿ ಒಟ್ಟಾಗಿ ಮಾಡಿದ ನಿರ್ಣಯವನ್ನು

ಒಬ್ಬ ಹೇಗೆ ತಾನೆ ಉಪಸಂಹರಿಸಲು ಬಂದೀತು ? ಅದು ವ್ಯಕ್ತಿಯ ಆತ್ಮದ ಪ್ರಶ್ನೆ ಹೇಗಾದೀತು ? ಒಟ್ಟಾಗಿ ಮಾಡಿದ ನಿರ್ಣಯವನ್ನು ಗೌರವಕ್ಕೆ ಚ್ಯುತಿಯಾಗದಂತೆ, ಆತ್ಮಕ್ಕೆ ವಿರೋಧವಾಗದಂತೆ ಉಪಸಂಹರಿಸಬೇಕೆಂದರೆ, ಮತ್ತೆ ಎಲ್ಲರೂ ಕಲೆತು ಚರ್ಚೆಮಾಡಿಯೇ ಉಪಸಂಹರಿಸಬೇಕು. ಈ ಆಗತ್ಯವಾದ ಕೆಲಸ ಆದಮೇಲೆ ವ್ಯಕ್ತಿಯ ಆತ್ಮದ ಮಾತು, ಕೆಲಸ. ಸೆರೆಯಾಳಿಗೆ ತನ್ನ ಆತ್ಮವನ್ನಾದರೂ ಬೇಕೆಂದ ಹಾಗೆ ಉಪಯೋಗಿಸುವ ಸ್ವಾತಂತ್ರ್ಯವಿದೆಯೇ ? ಅವನು ಹಾಗೆ ಮಾಡಬೇಕೆಂದು ನಿರೀಕ್ಷಿಸುವುದು ಸರಿಯೆ ? ನ್ಯಾಯವೆ ?

ಕಾಂಗ್ರೆಸ್ ನಾಯಕರು 'ಸಮರ್ಥರು ವಿಚಾರಶೀಲರು' ಎಂದು ಹೇಳಿ ಮತ್ತೆ ಅದೇ ಉಸುರಿನಲ್ಲಿ 'ಅವರ ನೀತಿ ಕೆಲಸಕ್ಕೆ ಬಾರದ್ದು, ಜೊಳ್ಳು' ಎಂದು ಹೇಳಿದ್ದೀರಿ. ಎರಡನೆ ಮಾತು ಮೊದಲಿನದನ್ನು ಅಳಿಸುವುದಿಲ್ಲವೆ ? ಸಮರ್ಥರಾದ ವಿಚಾರಪರರೂ ಎಷ್ಟೋ ಸಲ ತಪ್ಪು ತೀರ್ಮಾನ ಮಾಡಬಹುದು; ಆದರೆ ಅಂಥವರ 'ನೀತಿ ಕೆಲಸಕ್ಕೆ ಬಾರದ್ದು, ಜೊಳ್ಳು' ಎಂದು ಇದುವರೆಗೆ ಯಾರು ಹೇಳಿದ್ದೂ ನನಗೆ ಗೊತ್ತಿಲ್ಲ. ಯಾವುದೂ ತೀರ್ಮಾನ ಹೇಳುವ ಮುನ್ನ ಕೋಟ್ಯಾಂತರ ಜನರ ಪ್ರತಿನಿಧಿಗಳಾದ ನಾಯಕರ ನೀತಿಯ ಆಗು-ಹೋಗನ್ನು ಅವರೊಡನೆ ಚರ್ಚಿಸಬೇಡವೇ ? ಅಹಿಂಸೆಯ ಪ್ರತಿಜ್ಞೆ ಮಾಡಿದ, ನಿಶ್ಶಸ್ತ್ರರಾಗಿರುವ ಜನರ ಬೆಂಬಲ ಪಡೆದ ನಾಲ್ಕಾರು ಜನ ನಿಶ್ಶಸ್ತ್ರರ ಬಿಡುಗಡೆ ಮಾಡುವುದಕ್ಕೆ, ಪರಿಣಾಮ ಹೇಗೋ ಏನೋ ಎಂಬಷ್ಟು ಹೆದರಬೇಕೆ ನಿಮ್ಮ ಸರ್ವಶಕ್ತ ಸರಕಾರ ? ವರ್ಕಿಂಗ್ ಕಮಿಟಿ ಸದಸ್ಯರ ಮನಸ್ಸು ಹೇಗಿದೆಯೋ ತಿಳಿದುಕೊಳ್ಳಬೇಕೆಂಬ ಆಸೆ ನನಗಿದೆ. ನನ್ನನ್ನು ಅವರ ಜೊತೆಗೆ ಸೇರಿಸಲು ಇಷ್ಟೇಕೆ ಹಿಂಜರಿಯುತ್ತೀರಿ ?

'ಭಾರತ ಬಿಟ್ಟು ತೊಲಗಿ' ತೀರ್ಮಾನ ವಿಪತ್ಕಾರಕವೆಂದು ಹೇಳಿದೀರಿ. 'ಕಾಂಗ್ರೆಸಿನ ಹೊಣೆ'ಯೆಂಬ ಪುಸ್ತಕಕ್ಕೆ ಉತ್ತರವಾಗಿ ಈ ಬಗ್ಗೆ ಸಾಕಷ್ಟು ಹೇಳಿದೇನೆ. ಅವೆರಡನ್ನೂ ನೋಡಿಲ್ಲವೆ ನೀವು ? ಈಗಲಾದರೂ ನೋಡಿ. ಮತ್ತೆ ಹೇಳುತ್ತೇನೆ: ವರ್ಕಿಂಗ್ ಕಮಿಟಿ ನಾಯಕರ, ನನ್ನ, ಭಾಷಣಗಳನ್ನೆಲ್ಲಾ ಓದುವ ತನಕ ಸರಕಾರ ಕೈ ತಡೆದಿದ್ದರೆ ಇತಿಹಾಸವೇ ಬೇರೆಯಾಗುತ್ತಿತ್ತು.

ನಿಮ್ಮ ಮಂತ್ರಿಮಂಡಲಡಲ್ಲಿ ಭಾರತೀಯರೇ ಹೆಚ್ಚು ಎಂದು ಅದನ್ನೇ ದೊಡ್ಡದಾಗಿ ತಿಳಿದಿದೀರಿ. ಹೊರಗಿನವರು ಆ ಸ್ಥಾನದಲ್ಲಿದ್ದರೆಷ್ಟೋ ಈ ಭಾರತೀಯರೂ ಅಷ್ಟೇ ಮಟ್ಟಿಗೆ ಭಾರತದ ಪ್ರತಿನಿಧಿಗಳು! ಭಾರತದ ಓಟಿನಿಂದ ಆರಿಸಿಬಂದರೆ ಭಾರತೀಯನಲ್ಲದವನೂ ಭಾರತದ ಪ್ರತಿನಿಧಿಯೇ! ಜನಕ್ಕೆ ಇಷ್ಟವಿಲ್ಲದ ಭಾರತೀಯನು ಸರಕಾರದ ನಾಯಕನೇ ಆದರೂ ತೃಪ್ತಿಕರವಲ್ಲ.

ಭಾರತೀಯ ಸಿಪಾಯಿಗಳು ಮನಃಪೂರ್ವಕವಾಗಿ ದಂಡಿಗೆ ಸೇರಿದಾರೆಂದು ಹೇಳುವುದು ರೂಢಿಯಾಗಿದೆ. ನೀವೂ ಅದೇ ತಪ್ಪು ಮಾಡೀರಿ. ಬೇರೆ ಕಡೆ ಸಿಗುವ ಸಂಬಳ ಸೇನೆಯಲ್ಲಿ ದೊರೆತರೆ ಸಿಪಾಯಿಗಿರಿ ಮಾಡುವವನು ಬಂದೇ ಬರುತ್ತಾನೆ. ಮನಃಪೂರ್ವಕವೆಂದರೆ ಇದಕ್ಕೂ ಹೆಚ್ಚಿನ ಅರ್ಥವೆನೀದೆ? ಭಾರತೀಯ ಸಿಪಾಯಿಗಳ ಸೇನಾಪ್ರವೇಶಕ್ಕೆ ಈ ಶಬ್ದ ಸರಿಯಿಲ್ಲ. ಜಲಿಯನ್‌ವಾಲಾಬಾಗಿನಲ್ಲಿ ಅಧಿಕಾರಿಗಳ ಅಪ್ಪಣೆಯಿಂದಲೆ ಸಾಮೂಹಿಕ ಹತ್ಯೆಮಾಡಿದ ಸಿಪಾಯಿಗಳು ಮನಃಪೂರ್ವಕವಾಗಿ ಸೇನೆಗೆ ಸೇರಿದ ಸ್ವಯಂಸೇವಕರೆ? ಭಾರತದ ಹೊರಗೆ ಅಪೂರ್ವ ಶೌರ್ಯ ಸಾಹಸ ತೋರಿಸುತ್ತಿದಾರಲ್ಲ ಭಾರತೀಯ ಸಿಪಾಯಿಗಳು; ನಾಳೆ ನಮ್ಮವರನ್ನೇ ಗುಂಡಿಗಿಕ್ಕೆಂದು ನಿಮ್ಮ ಅಪ್ಪಣೆಯಾದರೆ ಗುಂಡು ಹಾರಿಸರೆ? ಅಂಥವರಿಗೆ ಸ್ವಯಂಸೇವಕರೆಂಬ ಗೌರವನಾಮ ಒಪ್ಪೀತೆ?

ಭರತಖಂಡದಲ್ಲೆಲ್ಲ ವಿಮಾನ ಪ್ರವಾಸ ಮಾಡುತ್ತಿದೀರಿ ನೀವು. ಬಂಗಾಲದ ಅಸ್ಥಿಪಂಜರಗಳನ್ನು ನೋಡಿ ಬರಲು ನೀವು ಹಿಂಜರಿಯಲಿಲ್ಲ. ನಿಮ್ಮ ಪ್ರವಾಸಕ್ರಮ ಕೊಂಚ ಬದಲಿಸಿ, ನಿಮ್ಮ ಸೆರೆಯಾಳುಗಳ ಮನಸ್ಸನ್ನೂ ತಿಳಿಯಲು ಆಗಾಖಾನ್ ಅರಮನೆಯ ಮೇಲೂ ಅಹಮದ್‌ನಗರದ ಮೇಲೂ ಬಂದಿಳಿಯಲಾರಿರಾ? ಬ್ರಿಟಿಷ್ ಸರಕಾರವನ್ನು ಅದರ ಆಡಳಿತವನ್ನೂ ನಾವೆಷ್ಟೇ ಖಂಡಿಸಲಿ, ನಾವು ಬ್ರಿಟನ್ನಿನ ಗೆಳೆಯರು. ನಮ್ಮನ್ನು ನಂಬಿ ನೋಡಿ; ಫ್ಯಾಸಿಸಂ, ನಾಜಿಸಂ ಜಪಾನಿಸಂಗಳನ್ನು ಇದಿರಿಸುವುದರಲ್ಲಿ ನಮಗಿಂತ ನಿಮಗೆ ನೆರವಾಗುವವರು ಮತ್ತಾರೂ ಇಲ್ಲವೆಂಬುದು ನಿಮಗೇ ತಿಳಿದೀತು.

ನಿಮ್ಮ ಫೆಬ್ರುವರಿ ೨೫ರ ಪತ್ರಕ್ಕೆ ಬರುತ್ತೇನೆ. ನಾನೂ ಮೀರಾಬಾಯಿಯೂ ಮಾಡಿದ ಮನವಿಗೆ ಉತ್ತರ ಬಂದಿದೆ. ಎಲ್ಲರಿಗೂ ನೋಟೀಸ್ಸು ತಲುಪಿವೆ. ನನಗೆ ಒಂದ ಉತ್ತರ ಬರೀ ಪರಿಹಾಸ; ಮೀರಾಗೆ ಬಂದದ್ದು

ಅವಮಾನಕರ! ಸರಕಾರ ಕಳಿಸಿದ ನೋಟೀಸಿಗೆ ಬಂದಿಗಳು ಕಳಿಸಿದ ಉತ್ತರವನ್ನು ವಿಚಾರಣೆ ಮಾಡದೆಯೆ, ಅವರನ್ನು ಮೊದಲು ಬಂಧಿಸಿದವರೇ ಪರಿಶೀಲಿಸುವುದಾದರೆ ಈ ನಾಟಕ ಕೇವಲ ಪ್ರಹಸನ. ವಿದೇಶಿಗಳ ಮನೋತೃಪ್ತಿಗೆ ಈ ಏರ್ಪಾಡು ಮಾಡಿರಬೇಕು. ನ್ಯಾಯದಾನಕ್ಕಂತೂ ಅಲ್ಲ.

ನನ್ನ ಅಭಿಪ್ರಾಯ ಸರಕಾರಕ್ಕೆ ಗೊತ್ತಿದೆ. ನಾನೊಬ್ಬ ಅಸಾಧ್ಯ ಮನುಷ್ಯ ಎನ್ನಬಹುದು ಅವರು. ಅದು ಶುದ್ಧ ತಪ್ಪು. ನಾನದನ್ನು ವಿರೋಧಿಸುತ್ತೇನೆ. ನನ್ನ ಮಾತಿರಲಿ, ಮೀರಾಬಾಯಿಯ ಮಾತೋ? ಭಾರತ ನೌಕಾದಳಪತಿಯೊಬ್ಬನ ಮಗಳು; ಆಕೆ ತನ್ನ ಸುಖ ಜೀವನವನ್ನು ಬಿಟ್ಟು ನನ್ನೊಡನೆ ದುಡಿಯಬಯಸಿದಳು. ನನ್ನ ಬಳಿ ಬರಲು ಆಕೆ ಪಡುತ್ತಿದ್ದ ತವಕ ಕಂಡು ಆಕೆಯ ತಾಯಿತಂದೆ ಹರಸಿ ಕಳಿಸಿದರು. ಈಗ ಜನ ಸಾಮಾನ್ಯರ ಸೇವೆಗೆ ಆಕೆ ತನ್ನ ಬಾಳನ್ನು ಧಾರೆಯೆರೆದಿದ್ದಾಳೆ. ಉತ್ಕಲದ ಜನರ ಕಷ್ಟವನ್ನು ತಿಳಿದುಕೊಳ್ಳಲು ಆಕೆಯನ್ನು ನಾನು ಅಲ್ಲಿಗೆ ಕಳಿಸಿದೆ. ಸರಕಾರ ಗಳಿಗೆಗಳಿಗೆಗೂ ಜಪಾನರ ದಂಡಯಾತ್ರೆಯನ್ನು ನಿರೀಕ್ಷಿಸುತ್ತಿತ್ತು. ಕಾಗದ ಪತ್ರಗಳನ್ನು ಬೇರೆಡೆ ಸಾಗಿಸುವುದೋ ಸುಡುವುದೋ ನಡೆದಿತ್ತು. ಮೀರಾಬಾಯಿಯ ಮುಖ್ಯ ಕಚೇರಿ ಕಟಕ ವಿಮಾನ ನಿಲ್ದಾಣ. ಆಕೆ ನೀಡುತ್ತಿದ್ದ ನೆರವು ಕಂಡು ಅಲ್ಲಿನ ಸೇನಾಧಿಕಾರಿ ತುಂಬಾ ಸಂತಸಗೊಂಡಿದ್ದ. ದಿಲ್ಲಿಗೆ ಹೋಗಿ ದಳಪತಿ ಸರ್ ಅಲೆನ್ ಹಾರ್ಟ್ಲೀ, ದಳಪತಿ ವೋಲ್ಸ್ವರ್ತ, ಇಬ್ಬರನ್ನೂ ಆಕೆ ನೋಡಿದಾಗ, ಇಬ್ಬರೂ ಆಕೆಯ ಕೆಲಸವನ್ನು ಕೊಂಡಾಡಿದರು. ಸ್ವಜನ, ಸ್ವಕುಲ ಎಂದು ಸ್ವಾಗತ ನೀಡಿದರು. ಹೀಗೆ ಜೀವಸಹಿತ ಹುಗಿದಿಡಲು ಆಕೆ ನನಗೆ ಬೇಕಾದವಳೆಂಬುದೊಂದೇ ಕಾರಣವಿರಬೇಕು. ಕೂಡಲೆ ಆಕೆಯನ್ನು ಬಿಡುಗಡೆಮಾಡಿ; ಆಕೆಯನ್ನು ಪ್ರತ್ಯಕ್ಷವಾಗಿ ಕಂಡು, ತರುವಾಯ ನಿರ್ಧರಿಸಿ. ಆಕೆಯ ರೋಗವನ್ನು ಗುಣಪಡಿಸಲು ನನ್ನ ಪ್ರಾರ್ಥನೆಯಂತೆ ಸಿವಿಲ್ ಸರ್ಜನ್ನರನ್ನು ಸರಕಾರ ಕಳಿಸಿತು. ಆಕೆಗೆ ಪೂರ್ತಿ ಗುಣವಾಗಿಲ್ಲ. ಇನ್ನೂ ಆಕೆಯನ್ನು ಬಂಧಿಸಿಟ್ಟು ಅಮರಣಾಂತ ದುರ್ಬಲೆಯಾಗಿ ಮಾಡಿದರೆ ನಿಜವಾಗಿ ಶೋಚನೀಯ. ಮೀರಾಬಾಯಿಯ ಪ್ರಸ್ತಾಪ ಮಾಡಿದ್ದರ ಕಾರಣ, ಅನ್ಯಾಯಕ್ಕೆ ಅದೊಂದು ಒಳ್ಳೆ ಉದಾಹರಣೆಯೆಂತ.

ನಾ ಬರೆವ ಕಾಗದಗಳಿಗೆ ಒಂದು ಮಿತಿಹಾಕಿಕೊಂಡಿದ್ದೇನೆ. ಅದನ್ನು

ಮೀರಿ ಯಾರಿಗೂ ಬರೆವುದಿಲ್ಲ. ಈಗ ಮೀರಿದೆ; ನಿಮ್ಮ ಕ್ಷಮೆ ಬೇಡುತ್ತೇನೆ. ಇದು ತುಂಬಾ ಅಂತರಂಗದ ಕಾಗದವಾಯಿತು. ನನ್ನ ಗೆಳೆಯರ ವಿಚಾರದಲ್ಲಿ ನನ್ನ ಅಭಿಮಾನ ಈ ರೂಪ ತಾಳುತ್ತದೆ. ನಿರ್ವಂಚನೆಯಾಗಿ ಎಲ್ಲವನ್ನೂ ಇದರಲ್ಲಿ ಹೇಳಿದೇನೆ. ನಿಮ್ಮ ಭಾಷಣ ನನ್ನ ಹೃದಯಕವಾಟವನ್ನು ತೆರೆದಿದೆ. ಭರತಖಂಡದ, ಇಡೀ ಜಗತ್ತಿನ ಜನರ ಕಲ್ಯಾಣದೃಷ್ಟಿಯಿಂದ ನಿಮ್ಮ ಭಾಷಣಕ್ಕೆ ಈ ಪ್ರಾಮಾಣಿಕವಾದ, ಸ್ನೇಹಪೂರ್ಣ—ಆದರೆ ಖಡಾಖಂಡಿತವಾದ—ಉತ್ತರ ಕೊಟ್ಟಿದ್ದೇನೆ.

ಎಷ್ಟೋ ವರ್ಷದ ಹಿಂದೆ ದಕ್ಷಿಣ ಆಫ್ರಿಕಾದಲ್ಲಿ ಮಕ್ಕಳಿಗೆ ಪಾಠ ಹೇಳುತ್ತಿದ್ದಾಗ ವರ್ಡ್ಸ್‌ವರ್ತ್ ಕವಿ ಬರೆದ "Happy Warrior" ಎಂಬ ಪದ್ಯ ಹೇಳುತ್ತಿದ್ದೆ. ಈಗ ಆ ಕತೆ ನೆನಪಾಗುತ್ತಿದೆ. ನಿಮ್ಮಲ್ಲೂ ಅದೇ ಗುಣವಿಶೇಷವಿದೆಯೆಂದು ನನಗನಿಸಿದರೆ ಎಷ್ಟು ಸಂತೋಷವಾದೀತೋ! ಈ ಕದನ ಕೇವಲ ಪಶುಬಲದ ಬಲಾಬಲ ಪರೀಕ್ಷೆಯಲ್ಲೇ ಕೊನೆಗಾಣುವುದಾದರೆ, ಶತ್ರು-ಮಿತ್ರ ದೇಶಗಳ ಪಾಡು ಕಡೆಗೆ ಒಂದೇ ಆದಂತೆ.

ನಿಮ್ಮವ
ಮೋ. ಕ. ಗಾಂಧಿ

---

## ವೈಸರಾಯರ ಉತ್ತರ

ವೈಸರಾಯ್ ಗೃಹ, ದಿಲ್ಲಿ
೨೮—೩—೧೯೪೪

ಪ್ರಿಯ ಗಾಂಧಿಯವರಿಗೆ,

ಮಾರ್ಚ್ ೯ರ ನಿಮ್ಮ ಪತ್ರ ಮುಟ್ಟಿತು. ಕಾಮನ್ಸ ಸಭೆಯಲ್ಲಿ ಬಟ್ಲರ್ ಕೊಟ್ಟ ಉತ್ತರ ಕುರಿತು ನೀವು ಮಾಡಿರುವ ಆಕ್ಷೇಪಣೆಗೆ ಗೃಹಶಾಖಾ ಕಾರ್ಯದರ್ಶಿಗಳಿಂದ ಬೇರೆ ಉತ್ತರ ಬರಲಿದೆ. ಶ್ರೀಮತಿ ಗಾಂಧಿಯವರ ರೋಗದಲ್ಲಿ ಸರಕಾರ ಅಸಡ್ಡೆ ತೋರಿತೆಂಬ ಅಭಿಪ್ರಾಯ ನಿಮಗಿದ್ದರೆ ವಿಷಾದಕರ. ಮಿಸ್ ಸ್ಲೇಡರ ವಿಚಾರದಲ್ಲಿ ನೀವು ಹೇಳಿರುವ ಅಂಶಗಳನ್ನು ಗಮನಿಸಿ ಆಕೆಯ ಬಿಡುಗಡೆಯನ್ನು ಪರಿಶೀಲಿಸಲಾಗುವುದು.

ದೀರ್ಘವಾದ ವಾದವಿವಾದಕ್ಕೆ ಇಳಿಯುವುದರಿಂದ ಲಾಭವಾದೀತೆಂದು ನನಗೆ ತೋರುವುದಿಲ್ಲ. ನಿಮ್ಮ ಕಾಗದದಲ್ಲಿ ನೀವೆತ್ತಿರುವ ಅಂಶಗಳಿಗೆ ವಿವರ ವಾಗಿ ಉತ್ತರ ಕೊಡುವ ಯೋಚನೆ ನನಗಿಲ್ಲ. ಆದರೆ ಭರತಖಂಡದ ಮುಂದಿನ ಪ್ರಗತಿ, ನಿಮ್ಮ ಬಂಧನದ ಕಾರಣ–ಈ ವಿಚಾರಗಳಲ್ಲಿ ನನ್ನ ಸ್ಪಷ್ಟ ಅಭಿಪ್ರಾಯವನ್ನು ನಿಮಗೆ ತಿಳಿಸುವುದೇ ಉತ್ತಮವಾದ ದಾರಿಯೆಂದು ನನ್ನ ಭಾವನೆ.

ಕ್ರಿಪ್ಸ್ ಸಲಹೆಗಳು ಸಾರ್ವಭೌಮ ಸರಕಾರದ ಆಶಯವನ್ನು ಕೊಂಚವೂ ಅನುಮಾನಕ್ಕೆ ಎಡೆಯಿಲ್ಲದಂತೆ ಸ್ಪಷ್ಟಪಡಿಸಿದವು. ಪ್ರಮುಖ ಪಕ್ಷಗಳವರು ಒಪ್ಪಿ ಸಿದ್ಧಮಾಡಿದ ವ್ಯವಸ್ಥೆಯಂತೆ ಭಾರತಕ್ಕೆ ಸ್ವಯಂ ಪ್ರಭುತ್ವಾಧಿಕಾರ ಕೊಡುವುದಾಗಿ ಅದರಲ್ಲಿ ತಿಳಿಸಲಾಗಿದೆ. ಆ ಗುರಿಯನ್ನು ನಾನು ಸಂಪೂರ್ಣವಾಗಿ ಒಪ್ಪುವೆನೆಂದು ಹೇಳಬೇಕಾಗಿಲ್ಲ. ಭಾರತವನ್ನು ಅವ್ಯವಸ್ಥೆಯಲ್ಲಿ, ಕ್ರಾಂತಿಯಲ್ಲಿ ಮುಳುಗಿಸದೆ ಆ ಸ್ಥಾನ ದೊರಕಿಸಿಕೊಡ ಬೇಕೆಂದು ನನ್ನ ಇಚ್ಛೆ. ಸರಿಯಾದ ನಿರ್ಣಯಕ್ಕೆ ಬರಲು ತುಂಬಾ ವಿವೇಕ ಬೇಕು; ಸೌಹಾರ್ದ ಬೇಕು. ಒಳ್ಳೆಯ ನಾಯಕತ್ವದಲ್ಲಿ ಅದು ಸಾಧ್ಯವೆಂಬ ನಂಬಿಕೆ ನನಗಿದೆ.

ಈ ಮಧ್ಯೆ ಮಾಡಬೇಕಾದ ಕೆಲಸ ಬಹಳ ಇದೆ. ಆಧುನಿಕ ವಿಶ್ವದಲ್ಲಿ ಭಾರತವು ತನ್ನ ಸ್ಥಾನವನ್ನು ಆಕ್ರಮಿಸಬೇಕಾಗಿದ್ದರೆ ಆರ್ಥಿಕ ಕ್ಷೇತ್ರದಲ್ಲಿ ತುಂಬಾ ಕೆಲಸವಾಗಬೇಕು. ಇದುವರೆಗೆ ಭಾರತಕ್ಕೆ ಅಪರಿಚಿತವಾದ ಬದಲಾವಣೆಗಳನ್ನೂ, ಪ್ರಗತಿಯನ್ನೂ ಅದು ಸ್ವಾಗತಿಸಬೇಕು. ತನ್ನ ಜನರ ಜೀವನದ ಮಟ್ಟವನ್ನು ಹೆಚ್ಚಿಸಬೇಕು. ಅಂಥ ಕೆಲಸ ಬಹುಮಟ್ಟಿಗೆ ರಾಜಕೀಯೇತರವಾದುದು. ಆದರೂ ಅದನ್ನು ವಿಲಂಬಿಸುವಂತಿಲ್ಲ. ಈ ಕಾರ್ಯಕ್ಕೆ ಕೈಹಾಕಿದರೆ ಎಷ್ಟೋ ಹೊಸ ಗಾಢ ಸಮಸ್ಯೆಗಳು ತಲೆಹಾಕುತ್ತಿವೆ. ಅವನ್ನು ಬಿಡಿಸಲು ಭಾರತದ ಪ್ರವೀಣರೆಲ್ಲ ಒಂದುಗೂಡಬೇಕಾದೀತು. ಭರತ ಖಂಡವು ವಿಶಾಲವಿಶ್ವದಿಂದ ಪ್ರತ್ಯೇಕವಾಗಿ ನಿಂತು ಈ ಸಮಸ್ಯೆಗಳನ್ನು ಬಿಡಿಸಲಾರದು. ಬ್ರಿಟನ್ನಿನ ಸಹಾಯವಿಲ್ಲದೆ ಈ ಕೆಲಸ ಆಗದು. ಎಲ್ಲ ಪಕ್ಷಗಳ ನಾಯಕರೂ ದೇಶವನ್ನು ಸ್ವಾತಂತ್ರ್ಯದ ಗುರಿಯ ಕಡೆಗೆ ಒಯ್ಯುತ್ತಿದೇವೆಂಬ ದೃಢ ವಿಶ್ವಾಸದಿಂದ ಸಹಕರಿಸಬಹುದಾದ ಕಾರ್ಯವಿದು.

ಕಾಂಗ್ರೆಸ್ಸಿನ ಈಗಿನ ನೀತಿ ಭರತಖಂಡವು ಸ್ವಯಂಪ್ರಭುತ್ವದ ಗುರಿ ಮುಟ್ಟಲು ಕಂಟಕಪ್ರಾಯವೇ ಹೊರತು, ಆ ಮಾರ್ಗ ಸುಗಮವಾಗುವಂತೆ ಮಾಡುತ್ತಿಲ್ಲ. ಈಗಿನ ಕದನದಲ್ಲಿ ಮಿತ್ರದೇಶಗಳು ಶತ್ರುದೇಶಗಳನ್ನು ಸೋಲಿಸಬೇಕಾದ್ದು ಅತ್ಯಗತ್ಯ ನೀವೇ ಹಾಗೆಂದು ಒಪ್ಪಿಕೊಂಡಿದೀರಿ. ಇಂಥ ಸಮಯದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಸರಕಾರದೊಂದಿಗೆ ಸಹಕರಿಸಲು ತಿರಸ್ಕರಿಸಿತು; ರಾಜೀನಾಮೆ ಕೊಡುವಂತೆ ಕಾಂಗ್ರೆಸ್ ಮಂತ್ರಿಗಳಿಗೆ ಆಜ್ಞೆಮಾಡಿತು. ದೇಶದ ಆಡಳಿತದಲ್ಲಾಗಲಿ, ಸಂಯುಕ್ತ ಜನಾಂಗಗಳ ಸಹಾಯಕ್ಕಾಗಿ ನಡೆದ ಸಂಗ್ರಾಮ ಪ್ರಯತ್ನದಲ್ಲಾಗಲಿ ಭಾಗ ವಹಿಸಕೂಡದೆಂದು ನಿರ್ಧರಿಸಿತು. ಭರತಖಂಡಕ್ಕೆ ಅತ್ಯಂತ ಉಗ್ರ ವಿಪತ್ತು ಒದಗಿದಾಗ, ಜಪಾನರು ದಂಡಯಾತ್ರೆ ನಡೆಸುವ ಸಂಭವ ಇದ್ದಾಗ, ಬ್ರಿಟಿಶರು ಭರತಖಂಡವನ್ನು ಬಿಟ್ಟು ಹೊರಡಬೇಕೆಂದು ಸೂಚಿಸುವ ನಿರ್ಣಯವನ್ನು ಮಾಡಿತು. ಭಾರತದ ಗಡಿಯಲ್ಲಿ ಜಪಾನರನ್ನು ಇದುರಿಸುವ ನಮ್ಮ ಸಾಮರ್ಥ್ಯಕ್ಕೆ ಇದರಿಂದ ಕುಂದುಂಟಾಗದೇ ಇದ್ದೀತೇ? ಬ್ರಿಟಿಶರು ಈ ಕೂಡಲೇ ಭಾರತವನ್ನು ಸಂಪೂರ್ಣವಾಗಿ ಬಿಡುವುದರಿಂದ ಭರತಖಂಡದ ಸಮಸ್ಯೆಗಳನ್ನು ಬಿಡಿಸಲು ಸಾಧ್ಯವಿಲ್ಲವೆಂಬುದನ್ನು ನಾನು ಮನಗಂಡಿದೇನೆ.

ಉದ್ದಿಶ್ಯಪೂರ್ವಕವಾಗಿ ಜಪಾನರಿಗೆ ಸಹಾಯ ಮಾಡುವ ಇಷ್ಟ ನಿಮಗಾಗಲಿ, ಕಾಂಗ್ರೆಸ್ ಪಕ್ಷಕ್ಕಾಗಲಿ ಇದೆಯೆಂದು ನಾ ದೂಷಿಸುವುದಿಲ್ಲ. ಗಾಂಧಿಯವರೇ, ನೀವು ತುಂಬಾ ಪ್ರತಿಭಾವಂತರು. ನಿಮ್ಮ ನಿರ್ಣಯದಿಂದ ಸಂಗ್ರಾಮ ಪ್ರಯತ್ನಕ್ಕೆ ಅಡ್ಡಿಯೊದಗಿತೆಂಬುದು ನಿಮಗೆ ತಿಳಿಯದಿರಲಾರದು: ಭರತಖಂಡವನ್ನು ಸಂರಕ್ಷಿಸಿಕೊಳ್ಳುವ ಯೋಗ್ಯತೆ ನಿಮಗಿಲ್ಲವೆಂಬ ಅಪನಂಬಿಕೆ ನಿಮ್ಮಲ್ಲಿ ಬೆಳೆದಿತ್ತೆಂಬುದು ಸ್ಪಷ್ಟವಾಗಿದೆ. ನಾವು ಯುದ್ಧಸಂಕಟಕ್ಕೆ ಸಿಲುಕಿದೇವೆಂದು ತಿಳಿದು ರಾಜಕೀಯ ಲಾಭಕ್ಕೆ ಇದೇ ಸಮಯವೆಂದು ಭಾವಿಸಿದೀರಿ. ಭರತಖಂಡದ ಕ್ಷೇಮಕ್ಕೆ ಜವಾಬ್ದಾರರಾಗಿದ್ದವರು ಈಗ ತೋರಿದ್ದಕ್ಕಿಂತ ಭಿನ್ನವರ್ತನೆಯನ್ನು ಹೇಗೆ ತೋರಿಸಬಹುದಾಗಿತ್ತೊ ನನಗೆ ಅರ್ಥವಾಗದೆ ಇದೆ. ಈ ನಿರ್ಣಯ ತಂದವರನ್ನು ದಸ್ತಗಿರಿ ಮಾಡದೆ ಬಿಡಲು ಮಾರ್ಗವೇ ಇರಲಿಲ್ಲ. ದಸ್ತಗಿರಿಗಳಾದ ಮೇಲೆ ನಡೆದ ಗಲಭೆಗಳಲ್ಲಿ ಕಾಂಗ್ರೆಸ್ಸಿನ ಸಾಮಾನ್ಯ ಜವಾಬ್ದಾರಿ ಕುರಿತು ಒಂದು ಮಾತು. ಆಗ ನಾನು ದಂಡನಾಯಕನಾಗಿದ್ದೆ. ಕಾಂಗ್ರೆಸ್ಸಿನ ಬೆಂಬಲಗಾರರು ಬರ್ಮಾಗಡಿಗೆ

ಹೋಗುವ ಬಹುಮುಖ್ಯ ಮಾರ್ಗವನ್ನು ಕಡಿದು ಹಾಕಿದರು. ಕಾಂಗ್ರೆಸ್ಸಿನ ಹೆಸರಿನಲ್ಲೇ, ಕಾಂಗ್ರೆಸ್ ಧ್ವಜವನ್ನು ಪಕ್ಕದಲ್ಲಿಟ್ಟುಕೊಂಡೇ ಈ ಕೆಲಸ ನಡೆಸಿದರು. ಅದ್ದರಿಂದ ನಡೆದ ಘಟನೆಗಳ ದೋಷ ಕಾಂಗ್ರೆಸ್ಸಿನದಲ್ಲವೆಂದು ನಾನು ಭಾವಿಸಲಾರೆ. ಬುದ್ಧಿವಂತರೂ ಅನುಭವಿಗಳೂ ಆದ ನಿಮಗೆ, ನಿಮ್ಮ ನೀತಿಯಿಂದ ಏನು ಫಲವಾದೀತೆಂದು ತಿಳಿದಿರಲಿಲ್ಲವೆಂದು ನಂಬಲು ಸಾಧ್ಯವಿಲ್ಲ. ಈ ಸಂಬಂಧವಾಗಿ ಕಾಂಗ್ರೆಸ್ ಪಕ್ಷ ಕೈಕೊಂಡ ಕಾರ್ಯಕ್ರಮ ಭರತಖಂಡದ ನಿಜವಾದ ಮನೋಭಾವವನ್ನು ಸೂಚಿಸುವುದೆಂದಾಗಲಿ, ಕಾಂಗ್ರೆಸ್ಸಿನ ಅಸಹಕಾರ ನೀತಿಯನ್ನು ಭಾರತದ ಬಹು ಜನ ಒಪ್ಪುವರೆಂದಾಗಲಿ ನಾನು ನಂಬಲಾರೆ.

ಸಂಗ್ರಹವಾಗಿ ಹೇಳುವುದಾದರೆ, ಸಾಮಾನ್ಯ ಸಹಕಾರ ದೊರೆಯುವುದಾದರೆ, ಭಾರತದ ಆರ್ಥಿಕ ಸಮಸ್ಯೆಗಳನ್ನು ತಕ್ಷಣ ಸಾಧಿಸಲು ನಾವು ಬಹಳ ಕೆಲಸ ಮಾಡಬಹುದು. ಅಲ್ಲದೆ ಭಾರತವು ಸ್ವಯಂ ಪ್ರಭುತ್ವಾಧಿಕಾರದ ಕಡೆಗೆ ಎಡೆಬಿಡದೆ ಬಹುದೂರ ಮುಂಬರಿಯಬಹುದು. ಭರತಖಂಡದ ಕ್ಷೇಮಕ್ಕೆ ಕಾಂಗ್ರೆಸ್ ಸಲ್ಲಿಸಬಹುದಾದ ಪರಮೋತ್ತಮ ಸೇವೆಯೆಂದರೆ ಅಸಹಕಾರದ ನೀತಿಯನ್ನು ತ್ಯಜಿಸಿ, ಭರತಖಂಡವು ರಾಜಕೀಯ, ಆರ್ಥಿಕಪಥಗಳಲ್ಲಿ ಮುಂದೆ ಹೋಗಲು ಸಾಧ್ಯವಾಗುವಂತೆ ಇತರ ಪಕ್ಷಗಳೊಂದಿಗೂ ಬ್ರಿಟಿಷ್ ಸರಕಾರದೊಂದಿಗೂ ಸಹಕರಿಸುವುದು. ಈ ಪ್ರಗತಿಯನ್ನು ಒಂದೇ ಏಟಿಗೆ ಸಾಧಿಸಲು ಸಾಧ್ಯವಿಲ್ಲ; ಕ್ರಮಕ್ರಮವಾಗಿ ಹೋಗಬೇಕು. ಇಂದು ಸಹಕಾರವನ್ನು ನೀಡಬೇಕೆಂದು ನೀವು ಸಾರಿ ಹೇಳುವುದಕ್ಕಿಂತ ಅಮೋಘ ಸೇವೆ ಮತ್ತಾವುದೂ ಇಲ್ಲ.

ಈ ಮಧ್ಯ ಸಂಗ್ರಾಮ ಜಯಪ್ರದವಾಗುವಂತೆಯೂ, ಸಂಗ್ರಾಮಾನಂತರ ಭಾರತವು ಪ್ರಗತಿಪಥ ತುಳಿಯುವಂತೆಯೂ ಮಾಡಬೇಕಾದ್ದು ಭಾರತದ ಪರಮ ಮಿತ್ರರಲ್ಲೊಬ್ಬನಾದ ನನ್ನ ಕೆಲಸ. ಈ ಕಾರ್ಯದಲ್ಲಿ ನನಗೆ ಬಹು ಮಂದಿ ಭಾರತೀಯರ ಸಹಕಾರವಿದೆಯೆಂದು ನಂಬಬಲ್ಲೆ.

ನಿಮ್ಮವ
ವೇವೆಲ್.—

## ಕೊನೆಯ ಪತ್ರ

೯—೪—೧೯೪೪

ಗೆಳೆಯರೆ,

ನಿಮ್ಮ ಮಾರ್ಚಿ ೨೮ರ ಕಾಗದ ಈ ೩ ತಾ. ಗೆ ಬಂತು. ವಂದನೆಗಳು—

ಮೊದಲ ಸಾದಾ ವಿಚಾರ: ನಿಮ್ಮ ಉತ್ತರ ತುಂಬಾ ಖಂಡಿತವಾಗಿದೆ. ನಿಮ್ಮ ಸೌಜನ್ಯಕ್ಕೆ ಸರಿಯಾಗಿ ನಾನೂ ಖಂಡಿತವಾಗಿ ಬರೆಯುತ್ತೇನೆ. ಸ್ನೇಹ ನಿಜವಾದರೆ ಮಾತು ಮನಬಿಚ್ಚಿ ಬರಬೇಕು. ಅಪ್ರಿಯವೆನಿಸಿದರೂ ಕೆಲವು ಸಲ ಹೇಳಲೇಬೇಕು. ನನ್ನ ಮಾತಿನಲ್ಲಿ ಎಲ್ಲಾದರೂ ನಿಮಗೆ ನೋವಾದರೆ ಮೊದಲೇ ಕ್ಷಮೆ ಬೇಡುತ್ತೇನೆ.

ನನ್ನ ಕಾಗದದ ಅತಿ ಮುಖ್ಯ ಅಂಶಗಳಿಗೆ ಉತ್ತರಕೊಡಲು ನೀವು ಸಮ್ಮತಿಸದಿರುವುದು ವಿಷಾದಕರ.

ಈಗಿನ ಆಡಳಿತದಲ್ಲಾಗಲಿ ಮುಂದಿನ ಏರ್ಪಾಡಿನಲ್ಲಾಗಲಿ ಕಾಂಗ್ರೆಸ್ಸು ಸಹಕರಿಸಬೇಕೆಂಬುದು ನಿಮ್ಮ ಪತ್ರದ ತಿರುಳು. ಹಾಗಾಗಲು ಉಭಯ ಪಕ್ಷಗಳಿಗೆ ಸಮಾನಸ್ಕಂಧತೆ ಬೇಕು; ಪರಸ್ಪರ ವಿಶ್ವಾಸಬೇಕು. ಸಮಾನತೆಯ ಹೆಸರೇ ಇಲ್ಲ. ಹೆಜ್ಜೆಹೆಜ್ಜೆಗೂ ಕಾಂಗ್ರೆಸ್ಸಿನಲ್ಲಿ ಸರಕಾರಕ್ಕೆ ಅವಿಶ್ವಾಸವೇ. ಇದರ ಫಲವಾಗಿ ಸರಕಾರದ ವಿಷಯದಲ್ಲಿ ಅನುಮಾನ ಸರ್ವಸಾಮಾನ್ಯವಾಗಿ ಹೋಗಿದೆ. ಸಾಲದ್ದಕ್ಕೆ ಭಾರತದ ಭವಿಷ್ಯತ್ ಕಲ್ಯಾಣವನ್ನು ಸಾಧಿಸುವ ಯೋಗ್ಯತೆ ಸರಕಾರಕ್ಕಿಲ್ಲವೆಂಬ ಭಾವನೆ ಕಾಂಗ್ರೆಸ್ಸಿನವರಲ್ಲಿ ಬೆಳೆದಿದೆ. ಅದಕ್ಕೆ ಕಾರಣ ಹಿಂದಿನ ಘೋರತರ ಅನುಭವ, ಈಗಿನ ಆಡಳಿತದ ವಿಧಾನ. ಭಾರತೀಯರ ಸಹಕಾರ ಬಯಸುವುದರ ಬದಲು ಭಾರತೀಯ ಪ್ರತಿನಿಧಿಗಳ ಮೂಲಕ ಜನರೊಂದಿಗೆ ನೀವು ಸಹಕರಿಸುವ ಕಾಲವಿಂದೇ ಬರಬೇಕಾಗಿತ್ತು.

ಇದೆಲ್ಲವೂ ಆಗಸ್ಟ್ ತೀರ್ಮಾನದಲ್ಲಿ ಅಡಗಿದೆ. ಅದರ ಹಿನ್ನೆಲೆಯ ಬಲ ಹಿಂಸೆಯಲ್ಲ; ಆತ್ಮತ್ಯಾಗ. ಕಾಂಗ್ರೆಸ್ಸಿನವನಾಗಲಿ, ಇತರನಾಗಲಿ, ಈ ನಿಯಮಕ್ಕೆ ವಿರುದ್ಧವಾಗಿ ನಡೆದು ಕಾಂಗ್ರೆಸ್ಸಿನ ಹೆಸರನ್ನು ಬಳಸಲಾರ.

ಈ ತೀರ್ಮಾನವನ್ನು ಲಿನ್‌ಲಿತ್‌ಗೋ ಸ್ವೀಕರಿಸಲಿಲ್ಲ. ನೀವೂ ಹಾಗೆಯೇ. ಇದರಲ್ಲಿ ನನ್ನ ಅಭಿಪ್ರಾಯ ಬದಲಿಸಲು ಕಾರಣವೇನೂ ಕಂಡಿಲ್ಲ. ನನ್ನ ಬಗ್ಗೆ ತುಂಬಾ ಔದಾರ್ಯ ತೋರಿಸಿ ನನಗೆ ಬುದ್ಧಿವಂತಿಕೆ, ಅನುಭವ, ಕುಶಾಗ್ರತೆ ಇದೆ ಎಂದಿದ್ದೀರಿ. ಈ ಮೂರೂ ನನ್ನಲ್ಲಿದ್ದರೂ ಕಾಂಗ್ರೆಸ್ ತೀರ್ಮಾನದಿಂದ ಯುದ್ಧಪ್ರಯತ್ನ ಅಡ್ಡಿಯಾಗಿದೆ ಹೇಗೋ ತಿಳಿಯಲಾರದವನಾಗಿದೇನೆ. ಅವಸರಗೊಂಡು ದಸ್ತಗಿರಿ ಮಾಡಿದ್ದರಿಂದ ನಡೆದ ಈ ಘಟನೆಗಳಿಗೆ ಸರಕಾರವೇ ಸಂಪೂರ್ಣವಾಗಿ ಕಾರಣ. ಅಂಥ ವಿಷಮ ಸನ್ನಿವೇಶವನ್ನು ಕೈ ಬೀಸಿ ಕರೆದವರು ಅವರೇ; ತೀರ್ಮಾನವನ್ನು ಸೂಚಿಸಿದವರಲ್ಲ.

ಆ ಕಾಲಕ್ಕೆ ನೀವು ದಂಡನಾಯಕರಾಗಿದ್ದುದರ ನೆನಪು ಕೊಟ್ಟಿದ್ದೀರಿ. ದಂಗೆಗೆ ಅಂಜದೆ, ನಿಮ್ಮ ಅನುಪಮ ಆಯುಧಬಲವನ್ನು ನಂಬಿ ನಡೆದಿದ್ದರೆ ಎಲ್ಲರಿಗೂ ಶುಭವಾಗುತ್ತಿತ್ತು. ಸರಕಾರ ಆಗ ನಿಧಾನಿಸಿದ್ದರೆ ರಕ್ತಪಾತ ಖಂಡಿತವಾಗಿಯೂ ಆಗುತ್ತಿರಲಿಲ್ಲ. ಜಪಾನಿನ ಭೀತಿಯೇ ಇಲ್ಲದ ಸಂಭವವಿತ್ತು. ದುರ್ದೈವದಿಂದ ಹಾಗಾಗಲಿಲ್ಲ. ನಮ್ಮ ತಲೆಯ ಮೇಲೆ ಇನ್ನೂ ಆ ವಿಪತ್ತು ಇದ್ದೇ ಇದೆ. ಎಲ್ಲಕ್ಕಿಂತ ಹೆಚ್ಚಿನದೆಂದರೆ ಸ್ವಾತಂತ್ರ್ಯವನ್ನೂ ಸರಕಾರ ಅದುಮುತ್ತಿರುವುದು. ೧೯೧೯ರಲ್ಲಿ ಪಂಜಾಬಿನಲ್ಲಿ ಮಾತ್ರ ಮಾರ್ಷಲ್‌ಲಾ- ಸೇನೆಯ ಸರ್ವಾಧಿಕಾರ-ಇತ್ತು. ಈಗ ಇಡೀ ಹಿಂದುಸ್ಥಾನದಲ್ಲೇ ಇದೆ. ಪರಿಸ್ಥಿತಿ ತೀರ ಕೆಡುತ್ತಿದೆ.

ನೀವು ಎರಡು ಅಪಾದನೆ ಮಾಡಿದಿರಿ: ಹಿಂದುಸ್ಥಾನವನ್ನು ನಾವು ಕಾಪಾಡಿಕೊಳ್ಳಲಾರೆವೆಂದು ನೀವು ನಂಬಿದ್ದೀರಿ; ಯುದ್ಧಪ್ರಾಪ್ತ ಸಂಕಟಸಮಯವೇ ನಿಮ್ಮ ರಾಜಕೀಯ ಲಾಭಕ್ಕೆ ಸುಸಮಯವೆಂದು ತಿಳಿದಿದೀರಿ. ಎರಡಕ್ಕೆ ಎರಡೂ ಸುಳ್ಳು. ನಿಮ್ಮ ಮಾತನ್ನು ಹಿಂತೆಗೆದುಕೊಳ್ಳಿ; ಅದೇ ಸರ್ವ ಸಮ್ಮತಮಾರ್ಗ. ಹೀಗೆಯೇ ಎಂದು ನಿರ್ಧರಿಸುವ ಮುನ್ನ ನಮ್ಮಲ್ಲಿರುವ ಸಾಕ್ಷ್ಯಸಾಮಗ್ರಿಯನ್ನೆಲ್ಲಾ ನಿಷ್ಪಕ್ಷಪಾತವಾದ ಪಂಚಾಯಿತಿಗೆ ಒಪ್ಪಿಸಿ ಅದರ ತೀರ್ಪನ್ನು ಪಡೆಯಿರಿ. ಇದೇ ನನ್ನ ಸಲಹೆ. ನೀವು ಹೀಗೆ ಮಾಡೀರೆಂಬ ನಂಬಿಕೆ ನನಗಿಲ್ಲ. ಏಕೆಂದರೆ, ಕಾಂಗ್ರೆಸ್ಸಿನವರ ಇತರ ವ್ಯವಹಾರದಲ್ಲಿ ಪ್ರಾಸಿಕ್ಯೂಟರ್, ನ್ಯಾಯಾಧೀಶ, ಜೈಲರ್ ಮೂರು ಅಧಿಕಾರಗಳನ್ನು ಒಬ್ಬನಿಗೇ ಒಪ್ಪಿಸುವುದು ಸರಕಾರದ ರೂಢಿ. ನಾವು ನಿರಪರಾಧಿಗಳೆಂದು

ಅಪಾದಿತರು ಸಾಧಿಸಲು ದಾರಿಯೇ ಇಲ್ಲವಾಗಿದೆ. ನ್ಯಾಯಾಲಯದ ತೀರ್ಮಾನಗಳನ್ನೇ ನಿಮ್ಮ ಹೊಸ ಸುಗ್ರೀವ ಶಾಸನಗಳು ಮೂಲೆಗೆ ಕೂಡಿಸಿವೆ. ಹೀಗಿರುವಲ್ಲಿ ಯಾರು ತಾನೆ ಸ್ವತಂತ್ರರಾಗಿರಬಲ್ಲರು ? ಇದು ಯುದ್ಧ ಸಮಯವೆಂದೀರಿ ನೀವು. ಸೋಜಿಗವಲ್ಲವೆ ಇದು ?

ನನ್ನ ಮನಸ್ಸಿಗೆ ಹಿಂದುಸ್ಥಾನವೆಲ್ಲಾ ಒಂದು ವಿಶಾಲ ಕಾರಾಗೃಹ. ಅದರಲ್ಲಿ ೪೦ ಕೋಟಿ ಜನ ಸೆರೆಯಾಳುಗಳು. ನೀವು ಅದರ ಪಾರುಪತ್ಯಗಾರರು. ಸರಕಾರದ ಈ ಸೆರೆಮನೆಗಳೆಲ್ಲಾ ಆ ದೊಡ್ಡ ಸೆರೆಮನೆಯ ಒಳಭಾಗ. ನಿಮ್ಮ ಕಾಗದದಲ್ಲಿ ಹೇಳಿರುವುದೇ ನಿಮ್ಮ ಅಭಿಪ್ರಾಯವಾದರೆ ನನ್ನಂಥವನಿಗೆ ಸೆರೆಮನೆಯೇ ಸರಿಯಾದ ಸ್ಥಳ. ಸರಕಾರದ ಮನಸ್ಸು ದೃಷ್ಟಿನೀತಿ ಬದಲಾಗುವ ತನಕ ನಿಮ್ಮ ಸೆರೆಯಾಳಾಗಿರುವುದೇ ನನಗೆ ಸಮಾಧಾನ. ಆದರೆ ಇಲ್ಲಿ ನನಗಾಗಿ ಆಗುವ ವೆಚ್ಚದಲ್ಲಿ ದಶಾಂಶ ವೆಚ್ಚ ಕೂಡ ತಗಲದ ಬೇರೆ ಸೆರೆಮನೆಗೆ ನನ್ನನ್ನೂ ನನ್ನ ಪರಿವಾರವನ್ನೂ ಕಳಿಸಿ ಎಂದು ನಾ ಮಾಡಿದ ಪ್ರಾರ್ಥನೆಯನ್ನು ಮನ್ನಿಸಿ.

ಬಟ್ಲರ್, ಗೃಹಶಾಖಾ ಕಾರ್ಯದರ್ಶಿ-ಇಬ್ಬರ ಹೇಳಿಕೆಗಳ ಬಗ್ಗೆ ನಾ ಮಾಡಿದ ಆಕ್ಷೇಪಣೆಗೆ ಉತ್ತರಬಂದಿದೆ. ಎರಡೂ ತೀರಾ ಅತೃಪ್ತಿಕರವೆನ್ನಲು ವ್ಯಸನವಾಗುತ್ತದೆ. ಸ್ವಯಂವೇದ್ಯವಾದ ಕೆಲವು ಸತ್ಯಗಳನ್ನೆ ಅದರಲ್ಲಿ ಮರೆತಿದಾರೆ. ರಾಜಕೀಯ ಸ್ಪರ್ಶವೇ ಇಲ್ಲದ ಮಾತಿನಲ್ಲೂ ಮೊಂಡತನ ತೋರಿಸುತ್ತಿದಾರೆ. ಈ ಪತ್ರವ್ಯವಹಾರ ಸಾಗಿದೆ. ಪುರುಸೊತ್ತಿದ್ದರೆ, ಆಸಕ್ತಿಯಿದ್ದರೆ ನೀವದನ್ನು ಗಮನಿಸಬೇಕೆಂದು ಕೋರುತ್ತೇನೆ.

ಮೀರಾಬಾಯಿಯ ವಿಚಾರವಾಗಿ ನಾ ತಿಳಿಸಿದ ಸಂಗತಿಗಳ ಮೇಲೆ ತಾವು ವಿಚಾರಿಸುವುದಾಗಿ ತಿಳಿಸಿದೀರಿ. ಅದಕ್ಕೆ ನನ್ನ ವಂದನೆ.

ನಿಮ್ಮವ

ಮೋ. ಕ. ಗಾಂಧೀ

# ಪರಿಶಿಷ್ಟ

( ಭಾರತದ ನಾಯಕತ್ವವನ್ನು ವಹಿಸುವ ಮೊದಲಿನ ಓಲೆಗಳು ಮತ್ತು ಉಳಿದ ಮಹತ್ವದ ಓಲೆಗಳು ಇದರಲ್ಲಿ ಅಡಕವಾಗಿವೆ. )

೧ ಚಂಪಾರಣ್ಯ
೨ ರೌಲೆಟ ಕಾಯದೆ
೩ ಮಾನವನ ಹಕ್ಕುಗಳು
೪ ಮೌಲಾನಾಗೆ

# ಚಂಪಾರಣ್ಯ ವ್ಯವಹಾರ

[ ಹಿಂದುಸ್ಥಾನಕ್ಕೆ ಮರಳಿಬಂದ ಮೇಲೆ ಗಾಂಧೀಜಿ ತೊಡಗಿದ ಮೊಟ್ಟ ಮೊದಲಿನ ಚಳುವಳಿ ಚಂಪಾರಣ್ಯದ ನೀಲಿತೋಟಗಳ ಕೂಲಿಕಾರರದು. ಅದರ ಇಡೀ ಇತಿಹಾಸವನ್ನು ರಾಜೇಂದ್ರಬಾಬು ಬರೆದಿದಾರೆ. ಆ ಸಂದರ್ಭದಲ್ಲಿ ಅಲ್ಲಿನ ಜಿಲ್ಲಾಧಿಕಾರಿ–ಮರುಗಾಡಿಗೇ ಈ ಜಿಲ್ಲೆ ಬಿಟ್ಟು ಹೊರಡಬೇಕು-ಎಂದು ಗಾಂಧೀಜಿಗೆ ಅಪ್ಪಣೆ ಮಾಡಿದ. ಅದಕ್ಕೆ ಉತ್ತರ ಇದು : ]

ನೀವು ಕಳಿಸಿದ ೧೬ನೆ ಕಲಮಿನ ಅಪ್ಪಣೆ ಈಗಲೇ ತಲುಪಿತು. ಇದನ್ನು ಕಳಿಸಿದ್ದೀರಲ್ಲ ಎಂದು ವಿಷಾದವಾಗುತ್ತದೆ. ಈ ವಿಭಾಗದ ಮುಖ್ಯಾಧಿಕಾರಿ ನನ್ನನ್ನು ಅಪಾರ್ಥಮಾಡಿಕೊಂಡರಲ್ಲ ಎಂದು ದುಃಖವಾಗುತ್ತದೆ. ನನಗೆ ಸಾರ್ವಜನಿಕ ಕರ್ತವ್ಯ ಭಾರವಿದೆ. ಆ ಹೊಣೆಗಾರಿಕೆಯ ಸಲುವಾಗಿ ನಾನೀ ಜಿಲ್ಲೆಯನ್ನು ಬಿಡಲು ಸಾಧ್ಯವಿಲ್ಲವೆಂದು ತಿಳಿಸುತ್ತೇನೆ. ಅಧಿಕಾರಿಗಳ ಚಿತ್ತ ಹಾಗಿದ್ದರೆ, ಈ ಅಪ್ಪಣೆಯನ್ನು ವಿರೋಧಿಸಿ ಅದರ ಶಿಕ್ಷೆ ಅನುಭವಿಸಲು ಸಿದ್ಧ.

ನನ್ನ ಉದ್ದೇಶ 'ಆಂದೋಳನವಿದ್ದೀತು' ಎಂದು ಕಮಿಷನರ್ ಬರೆದುದನ್ನು ನಾನು ತೀವ್ರವಾಗಿ ಖಂಡಿಸುತ್ತೇನೆ. ನನ್ನ ಉದ್ದೇಶ ಕೇವಲ ವಿಷಯ ಗ್ರಹಣ; ಮತ್ತಾವುದೂ ಅಲ್ಲ. ಸ್ವತಂತ್ರನಾಗಿರುವ ತನಕ ನಾನೀ ಜ್ಞಾನ ದಾಹಶಮನಕ್ಕೆ ಪ್ರಯತ್ನಮಾಡುತ್ತಲೇ ಇರುತ್ತೇನೆ.

೧೬—೪—೧೯೧೭ ನಿಮ್ಮ

ಮೋ. ಕ. ಗಾಂಧೀ

[ ಗಾಂಧೀಜಿ ಹೊರಗೆ ಹೋಗಲಿಲ್ಲ. ಸೆರೆಯಾದರು. ಮರುದಿನ ನ್ಯಾಯಾಧಿಪತಿಯ ಇದಿರು ಈ ಹೇಳಿಕೆ ಕೊಟ್ಟರು. ]

ನ್ಯಾಯಾಲಯದ ಅನುಮತಿಯಿಂದ ಈ ಚಿಕ್ಕ ಹೇಳಿಕೆ ಕೊಡಬಯಸುತ್ತೇನೆ. ಸರಕಾರದ ಅಪ್ಪಣೆಯನ್ನು ತಿರಸ್ಕರಿಸುವಂತೆ ಮಾಡುವ ಈ ಉಗ್ರ ಮಾರ್ಗವನ್ನು ಏಕೆ ತುಳಿದೆನೋ ತಿಳಿಸುತ್ತೇನೆ. ಇದು ಸ್ಥಳೀಯ ಅಧಿಕಾರಿಗಳೂ ನನಗೂ ಒಂದು ಅಭಿಪ್ರಾಯ ಭೇದವೆಂದು ನನ್ನ ವಿನೀತ ಅಭಿ

ಪ್ರಾಯ. ರಾಷ್ಟ್ರೀಯ ಸೇವೆ ಮಾಡಲೆಂದು ನಾನಿಲ್ಲಿಗೆ ಬಂದೆ. ನೀಲಿ ತೋಟಗಾರರು ತಮಗೆ ಅನ್ಯಾಯ ಮಾಡುತ್ತಿದಾರೆಂದು ಇಲ್ಲಿನ ರೈತರು ಹೇಳುತ್ತಿದಾರೆ. ಅವರಿಗೆ ನೆರವಾಗಿ ಬನ್ನಿ ಎಂದು ನನಗೆ ಆಹ್ವಾನಬಂತು. ಇಲ್ಲಿನ ಪರಿಸ್ಥಿತಿಯನ್ನೇ ತಿಳಿದುಕೊಳ್ಳದೆ ನಾನೇನು ನೆರವುಕೊಡಲಿ? ಆದ್ದರಿಂದ ಈ ವಿಷಯವನ್ನು ಅರಿತುಕೊಳ್ಳಲು ಬಂದಿದೇನೆ. ಸಾಧ್ಯವಾದರೆ ತೋಟಗಾರನ ಸಹಾಯವನ್ನು ಪಡೆಯುತ್ತೇನೆ. ನನಗಿನ್ನಾವ ಉದ್ದೇಶವೂ ಇಲ್ಲ. ನಾನಿಲ್ಲಿ ಬಂದುದರಿಂದ ಶಾಂತಿಭಂಗವಾಗುತ್ತದೆಂದಾಗಲಿ ಪ್ರಾಣಹಾನಿಯಾಗುತ್ತದೆಂದಾಗಲಿ ನಾನು ನಂಬಲಾರೆ. ಇಂಥ ವಿಷಯಗಳಲ್ಲಿ ನನಗೆ ಸಾಕಷ್ಟು ಅನುಭವವಿದೆ. ಆದರೆ ಸರಕಾರದ ಅಭಿಪ್ರಾಯವೇ ಬೇರೆ. ಅವರ ಕಷ್ಟವೂ ನನಗೆ ಗೊತ್ತು. ತಮಗೆ ಬಂದ ಸುದ್ದಿಯ ಬಲದ ಮೇಲೆ ಅವರು ಕೆಲಸ ಮಾಡಬೇಕು. ನಾನು ಶಾಸನವಿಧೇಯ ಪ್ರಜೆ. ಈ ಅಪ್ಪಣೆ ಬಂದಾಗ ಮೊದಲು ಇದನ್ನು ನಡಸಬೇಕೆಂಬೇ ನನಗೆ ಮನಸ್ಸಾಯಿತು. ಆದರೆ ನಾನು ಯಾರಿಗಾಗಿ ಇಲ್ಲಿಗೆ ಬಂದೆನೋ ಅವರಿಗಾಗಿ ನಾನು ಮಾಡಬೇಕಾದ ಕರ್ತವ್ಯಕ್ಕೆ ಚ್ಯುತಿಬಾರದೆ ನಾನು ಅದನ್ನು ನಡೆಸಲು ಸಾಧ್ಯವಿರಲಿಲ್ಲ. ಸದ್ಯ ಅವರ ನಡುವೆ ಇದ್ದರೇನೆ ನಾ ಮಾಡಬೇಕಾದ ಸೇವೆ ಸಾಧ್ಯ. ಆದ್ದರಿಂದ ನಾನಾಗಿಯೇ ಹೊರಟು ಹೋಗುವದು ಸಾಧ್ಯವಿರಲಿಲ್ಲ. ಈ ಕರ್ತವ್ಯ ಜಿಜ್ಞಾಸೆಯಲ್ಲಿ ನನ್ನನ್ನು ಹೊರಗೆ ಕಳಿಸುವ ಭಾರವನ್ನು ಸರಕಾರಕ್ಕೆ ಬಿಡಬೇಕಾಯಿತು. ಹಿಂದುಸ್ಥಾನದ ಸಾರ್ವಜನಿಕ ಜೀವನದಲ್ಲಿ ಒಂದು ಸ್ಥಾನವನ್ನು ಗಳಿಸಿದ ನನ್ನಂಥವನು ಇತರರಿಗೆ ಮೇಲ್ಪಂಗ್ತಿ ಹಾಕುವುದರಲ್ಲಿ ಬಹಳ ಜಾಗರೂಕನಾಗಿರಬೇಕೆಂಬುದನ್ನು ಬಲ್ಲೆ. ಈಗ ನಾವು ಇರುವ ರಾಜ್ಯಾಂಗ ರಚನೆಯಲ್ಲಿ ನನಗೆ ಒದಗಿದಂಥ ಸಂದರ್ಭದಲ್ಲಿ ಆತ್ಮಗೌರವವುಳ್ಳ ಮನುಷ್ಯನಿಗೆ ಬೇರೆ ದಾರಿಯೇ ಇಲ್ಲ. ನಾನು ಈಗ ಮಾಡಿದಂತೆ, ವಿನಯವಾಗಿ ಪ್ರತಿಭಟನೆಯಿಲ್ಲದೆಯೆ ಆಜ್ಞೋಲ್ಲಂಘನದ ಶಿಕ್ಷೆಗೆ ಗುರಿಯಾಗಬೇಕು. ನನಗೆ ಕೊಡುವ ಶಿಕ್ಷೆ ಕಡಿಮೆಯಾಗಲಿ ಎಂದು ನಾನೀ ಹೇಳಿಕೆ ಕೊಟ್ಟಿಲ್ಲ. ನನಗೆ ಶಾಸನದಲ್ಲಿ ಆಡಳಿತದಲ್ಲಿ ಗೌರವವಿಲ್ಲವೆ ಈ ಉಲ್ಲಂಘನವನ್ನು ಮಾಡಿಲ್ಲ, ಅವಕ್ಕಿಂತ ಮೇಲ್ತರದ ಶಾಸನಕ್ಕೆ, ಅಂತರಾತ್ಮದ ಆಜ್ಞೆಗೆ, ವಿಧೇಯನಾಗಿ ನಡೆದಿದೇನೆ ಎಂಬುದನ್ನು ತಿಳಿಸಲಿಕ್ಕೆ!

———•———

# ರೌಲೆಟ ಕಾಯಿದೆಯ ಸತ್ಯಾಗ್ರಹ

[ ೧೯೧೮ ಜುಲೈ, ರೌಲೆಟ್ ವರದಿಯು ಪ್ರಸಿದ್ಧವಾಯಿತು. ೧೯೧೯ ಫೆಬ್ರುವರಿ ೬ನೇ ದಿನ ಅದು ಬಿಲ್ಲಿನ ರೂಪದಿಂದ ವರಿಷ್ಠ ಕಾಯಿದೆ ಕೌನ್ಸಿಲ್ಲಿನ ಮುಂದೆ ಮಂಡಿಸಲ್ಪಟ್ಟಿತು. ಈ ಬಿಲ್ಲು ಕಾಯಿದೆರೂಪ ತಾಳುವದನ್ನು ಕಂಡು ಮಹಾತ್ಮರು ಕೆರಳಿ, ಒಂದು ವೇಳೆ ಇದು ಕಾಯದೇ ಸ್ವರೂಪವನ್ನು ತಾಳಿದರೆ—ಉಂಟಾಗುವ ಗಂಭೀರ ಪರಿಸ್ಥಿತಿಯನ್ನು ಸತ್ಯಾಗ್ರಹದ ಮೂಲಕ ಎದುರಿಸಲಾಗುವದು ಎಂದು ಸಾರಿ ಕೆಳಗಿನ ಸತ್ಯಾಗ್ರಹದ ಪ್ರತಿಜ್ಞೆಯನ್ನು ಪ್ರಕಟಿಸಿದರು. ಮಹಾತ್ಮರ ಭಾರತೀಯ ಹೋರಾಟವು ಇಲ್ಲಿಂದಲೇ ಪ್ರಾರಂಭವಾಯಿತು. ]

**ಪ್ರತಿಜ್ಞೆ**

೧೮ನೆ ಮಾರ್ಚ, ೧೯೧೯

" ಇಂಡಿಯನ್ ಕ್ರಿಮಿನಲ್ ಲಾ ಅಮೆಂಡಮೆಂಟ ಬಿಲ್ ನಂ ೧ ೧೯೧೯ರ ಹಾಗು ಕ್ರಿಮಿನಲ್ ಎಮರ್ಜನ್ಸಿ ಪಾವರ್ಸ್ ಬಿಲ್ ನಂ ೨. ಈ ಎರಡೂ ಬಿಲ್ಲುಗಳು ಅನ್ಯಾಯ ಮೂಲಕವಿರುತ್ತವೆ. ಭಾರತ ಸರಕಾರದ ಸುರಕ್ಷಿತತೆಯು ಯಾವ ವ್ಯಕ್ತಿ ಸ್ವಾತಂತ್ರ್ಯವನ್ನವಲಂಬಿಸಿದೆಯೋ ಆ ವ್ಯಕ್ತಿ ಸ್ವಾತಂತ್ರ್ಯ ಈ ಬಿಲ್ಲಿನಿಂದ ನಿರ್ನಾಮವಾಗುವದು. ಒಂದು ವೇಳೆ ಈ ಬಿಲ್ಲಿಗೆ ಕಾಯದೇ ಸ್ವರೂಪವು ಪ್ರಾಪ್ತವಾದರೆ, ಅದನ್ನು ಪೂರ್ಣ ಕಿತ್ತೊಗೆಯುವ ವರೆಗೆ ನಾವು ಆ ಕಾಯದೆಯನ್ನೂ ಮತ್ತು ಈ ಕೆಲಸಕ್ಕಾಗಿ ನಿಯಮಿಸಿದ ಕಮೀಟಿಯ ಮುಂದೆ ಮಾಡಬಹುದಾದ ಕಾಯದೆಗಳನ್ನೂ ನಾವು ವಿನಯ ಪೂರ್ವಕವಾಗಿ ಮುರಿಯುತ್ತೇವೆಂದು ಈ ಜಗತ್ತಿಗೆ ಸಾರುತ್ತೇವೆ. ಮತ್ತು ಈ ಯುದ್ಧವು ನಡೆಯುವ ವರೆಗೆ ನಾವು ಯಾವ ವ್ಯಕ್ತಿಯ ಜೀವಿತಕ್ಕೂ ವ್ಯಕ್ತಿಗೂ ಹಾಗು ಆಸ್ತಿಯ ವಿಷಯಕ್ಕೂ ಎಂದೂ ಅತ್ಯಾಚಾರವನ್ನು ಮಾಡುವದಿಲ್ಲ. ಮತ್ತು ಶ್ರದ್ಧೆಯ ಪೂರ್ವಕ ಸತ್ಯವನ್ನೇ ಪಾಲಿಸುತ್ತೇವೆಂದು ಪ್ರತಿಜ್ಞಾಬದ್ಧರಾಗಿ ಸಾರುತ್ತೇವೆ. "

[ ಮಹಾತ್ಮರ ಚಳುವಳಿಯ ಜೀವನಸೂತ್ರವಿದು, ಇದೇ ಇಂದಿಗೂ ಒರೆಗಲ್ಲಾಗಿ ನಿಂತಿದೆ. ]

## ಕಾಯಿದೆಭಂಗದ ಉಪಸಂಹಾರ

೧೯೧೯ನೆ ಜುಲೈ, ೨೧

“ ಕಾಯದೆಭಂಗವನ್ನು ಮತ್ತೆ ಪ್ರಾರಂಭಿಸುವದರಿಂದ ಅದರ ಪರಿಣಾಮವು ಭಯಂಕರವಾಗುವದೆಂದೂ ಸಾರ್ವಜನಿಕ ಶಾಂತತೆಯು ನಾಶವಾಗುವದೆಂದೂ ಮುಂಬಯಿ ಗವರ್ನರರ ಮುಖಾಂತರ, ಭಾರತ ಸರಕಾರವು ನನಗೆ ಸೂಚನೆಯನ್ನು ಕೊಟ್ಟಿದೆ. ಅನೇಕ ಪ್ರಮುಖ ವೃತ್ತಪತ್ರಗಳ ಸಂಪಾದಕರೂ ಇದೇ ಇಚ್ಛೆಯನ್ನೇ ಪ್ರಕಟಮಾಡಿದ್ದಾರೆ. ರಾಷ್ಟ್ರೀಯ ಪಕ್ಷದ ಪ್ರಮುಖ ಮಿತ್ರರು ನನಗೆ ಇದೇ ಸಲಹೆಯನ್ನು ಇತ್ತಿದ್ದಾರೆ. ಸತ್ಯಾಗ್ರಹದ ತತ್ವಗಳನ್ನರಿಯದ ಜನರಿಂದ ಮತ್ತೆ ಅತ್ಯಾಚಾರವಾದೀತೆಂಬುದೇ ಅವರ ಭಯವು. ನನ್ನ ಸತ್ಯಾಗ್ರಹವನ್ನು ಉಪಸಂಹರಿಸುವ ಸಮಯವು ಒದಗಿದೆ ಎಂದು ನಿರ್ಣಯಕ್ಕೆ ನಾನು ಬಂದೊಡನೆಯೇ ವ್ಹಾಯಿಸರಾಯರಿಗೆ ಒಂದು ಓಲೆಯನ್ನು ಕಳಿಸಿದ್ದೇನೆ. ರೌಲೆಟ್ ಕಾಯಿದೆಯನ್ನು ತಿರುಗಿ ತೆಗೆದುಕೊಳ್ಳಿರಿ. ಪಂಜಾಬದ ದಂಗೆಯ ವಿಚಾರಣೆಗಾಗಿ ನಿಷ್ಪಕ್ಷಪಾತವಾದ ಒಂದು ಸಮಿತಿಯನ್ನು ನಿಯಮಿಸಿರಿ. ಸೈನಿಕ ಕಾಯಿದೆಯಂತೆ ಶಿಕ್ಷಿಸಲ್ಪಟ್ಟ ಜನರ ಪುನರ್ವಿಚಾರಣೆಯನ್ನು ಮಾಡುವ ಅಧಿಕಾರವನ್ನು ಈ ಸಮಿತಿಗೆ ಕೊಡಿರಿ. ಬಾಬು ಕಾಲಿನಾಥರಾಯರ ಶಿಕ್ಷೆಯು ಅನ್ಯಾಯದ್ದಿದೆಯೆಂದು ಸಿದ್ಧವಾದ್ದರಿಂದ ಅವರನ್ನು ಕೂಡಲೇ ಮುಕ್ತಗೊಳಿಸಿರಿ ಎಂದು ಅದರಲ್ಲಿ ಕಾಣಿಸಿದ್ದೇನೆ. ಇವರ ವಿಷಯದಲ್ಲಿ ಪೂರ್ಣ ನ್ಯಾಯ ದೊರೆಯದಿದ್ದರೂ, ಅವರ ಶಿಕ್ಷೆಯ ಅವಧಿಯು ಬಹಳ ಕಡಿಮೆಯಾಗಿದೆ. ಇದೇನು ಸಾಮಾನ್ಯ ಸಂಗತಿಯಲ್ಲ.

ವಿಚಾರಣಾ ಕಮೀಟಿಯು ತೀವ್ರವಾಗಿ ನಿಯಮಿಸಲ್ಪಡುವದೆಂದು ಆಶ್ವಾಸನ ದೊರೆತಿದೆ. ಸರಕಾರದ ಸದಿಚ್ಛೆಯ ಈ ಲಕ್ಷಣಗಳು ಸ್ಪಷ್ಟವಾಗಿ ಕಾಣುತ್ತಿರುವಾಗ ಅವರು ಕೊಟ್ಟ ಎಚ್ಚರಿಕೆಯ ಸೂಚನೆಯನ್ನು ಮನ್ನಿಸದಿರುವದು ಬುದ್ಧಿವಂತಿಕೆಯದಾಗಲಿಲ್ಲ. ಕಾಯಿದೇಭಂಗವನ್ನು ಮಾಡುವವನ ಮನಸ್ಸಿನಲ್ಲಿ ಸರಕಾರವನ್ನು ಪೇಚಿನಲ್ಲಿ ಹಾಕಬೇಕೆಂದು ಎಂದೂ ಇರುವದಿಲ್ಲ.

ದೇಶ, ಸರಕಾರ ಹಾಗು ಅತ್ಯಂತ ಅನ್ಯಾಯದಿಂದ, ನಿಷ್ಠುರ ರೀತಿಯಿಂದ ಶಿಕ್ಷೆಗೊಳಗಾದ ನನ್ನ ಪಂಜಾಬದ ಬಂಧುಗಳ ಸೇವೆಯು ಈಗ ಸತ್ಯಾಗ್ರಹ ವನ್ನು ತಾತ್ಪೂರ್ತಿಕವಾಗಿ ತಡೆಹಿಡಿಯುವದರಿಂದಲೇ ಹೆಚ್ಚಾಗಿ ಸಾಧಿಸುವ ದೆಂದು ನನಗನಿಸುತ್ತದೆ. ಕೊರೆದ ಕಡ್ಡಿಯನ್ನು ಒಣಹುಲ್ಲಿನ ಮೇಲೆ ಒಗೆದೆ ನೆಂದು ನನ್ನ ಮೇಲೆ ಆಕ್ಷೇಪವಿದೆ. ವೇಳೆವೇಳೆಗೆ ನಾನು ಕೈಕೊಳ್ಳುವ ಪ್ರತಿ ಕಾರವೇ ಬೆಂಕಿಯ ಕಿಡಿಯಾದರೆ, ರೌಲೆಟ್ ಕಾಯಿದೆ ಹಾಗು ಅದನ್ನು ಕಾಯಿದೇ ಪುಸ್ತಕದಲ್ಲಿ ಸೇರಿಸುವ ಸರಕಾರದ ಆಗ್ರಹ ಇವು ಭಾರತ ಸರ ಕಾರವು ಒಗೆದ ಸಾವಿರಾರು ಬೆಂಕಿಯ ಕಿಡಿಗಳೆಂದು ನನ್ನ ಅಭಿಪ್ರಾಯವಿದೆ. ಕಾಯಿದೇಭಂಗವು ಪೂರ್ಣವಾಗಿ ನಿಲ್ಲಬೇಕೆಂದು ಸರಕಾರದ ಬಯಕೆಯಿದ್ದರೆ- ಈ ಕಾಯಿದೆಯನ್ನು ತಿರುಗಿ ತೆಗೆದುಕೊಳ್ಳುವದೊಂದು ಉಪಾಯವಿದೆ. ಈ ಬಿಲ್ಲನ್ನು ಸರಕಾರವು ಸಮರ್ಥಿಸಿದ್ದರಿಂದ ಜನರಲ್ಲಿ ಪ್ರತಿಕಾರದ ಬುದ್ಧಿಯು ಹೆಚ್ಚಾಯಿತು ಅದು ಇನ್ನೂ ಬದಲಾಗಿಲ್ಲ. ''

ಕೊನೆಗೆ ಮಹಾತ್ಮರು ಶುದ್ಧ ಸ್ವದೇಶಿಯ ಪ್ರಸಾರದಲ್ಲಿ ಎಲ್ಲರೂ ಸಹ ಕರಿಸಬೇಕೆಂದೂ, ಹಿಂದು-ಮುಸಲ್ಮಾನರ ಐಕ್ಯಕ್ಕಾಗಿ ಪ್ರಯತ್ನಿಸಬೇಕೆಂದೂ ತಮ್ಮ ಸತ್ಯಾಗ್ರಹಿ ಮಿತ್ರರಿಗೆ ಬಿನ್ನವಿಸಿಕೊಂಡಿದ್ದಾರೆ.

[ ಮಹಾತ್ಮರ ತಂತ್ರ-ತತ್ವಜ್ಞಾನಗಳನ್ನು ಈ ಪ್ರತಿಜ್ಞೆ, ಪ್ರಕಟನೆಗಳು ಸ್ಪಷ್ಟಗೊಳಿಸುತ್ತವೆ. ]

---

# ಮಾನವನ ಹಕ್ಕುಗಳು

[ ಮಾನವನ ಮೂಲಭೂತ ಹಕ್ಕುಗಳು ಏನು, ಯಾವುವು ಎಂಬ ಶಾಸ್ತ್ರೀಯ ಚರ್ಚೆಯೊಂದು ೧೯೪೦ರಲ್ಲಿ ನಡೆಯಿತು. ಲೋಕದಲ್ಲಿನ ಮಹಾ ವಿದ್ವಾಂಸರೆಲ್ಲ ಆ ಬಹಿರಂಗ ಚರ್ಚೆಯಲ್ಲಿ ಪಾಲುಗೊಂಡರು. ಆ ಚರ್ಚೆಗೆ ಮೂಲ ಕಾರಣ ಶ್ರೀ ಎಚ್. ಜಿ. ವೆಲ್ಸ್. ಅವರು ಗಾಂಧೀಜಿಗೆ ಪತ್ರ ಬರೆದು ಇವರ ಅಭಿಪ್ರಾಯವನ್ನು ಕೇಳಿದ್ದರು. ಗಾಂಧೀಜಿಯ ಉತ್ತರ ಇದು : ]

ನಿಮ್ಮ ತಂತಿ ತಲುಪಿತು. ನಿಮ್ಮ ಐದೂ ಲೇಖಗಳನ್ನು ಸಾವಧಾನ ವಾಗಿ ಓದಿದೇನೆ. ನೀವು ತುಳಿದ ದಾರಿ ತಪ್ಪು ಎಂದು ಹೇಳಲು ಎಡೆಕೊಡಿ. ನೀವು ಬರೆದಿರುವ ಹಕ್ಕುಗಳ ಪಟ್ಟಿಗಿಂತ ಮೇಲಾದ ಪಟ್ಟಿಯನ್ನು ನಾನು ಬರೆಯಬಲ್ಲೆ. ಆದರೆ ಅದರಿಂದ ಏನು ಪ್ರಯೋಜನ ? ಅದನ್ನು ಪಾಲಿಸುವ ಪಾಲಕ ಯಾರು ? ಪ್ರಚಾರದಿಂದ, ಶಿಕ್ಷಣ ಪ್ರಸಾರದಿಂದ ಅದು ಸಾಧ್ಯ ಎನ್ನುವುದಾದರೆ ನೀವು ಬೇರನ್ನು ಬಿಟ್ಟು ಕೊಂಬೆಗೆ ನೀರು ಎರೆದಂತಾದೀತು. ಸರಿಯಾದ ದಾರಿಯನ್ನು ನಾನು ಹೇಳಲೆ ? ಮಾನವ ಕರ್ತವ್ಯಗಳ ಪಟ್ಟಿ ಯೊಂದನ್ನು ಮೊದಲು ಮಾಡಿ. ಚಳಿಗಾಲದ ಹಿಂದೆಯೇ ಬೇಸಿಗೆ ಬರುವಂತೆ ಅದರ ಹಿಂದೆಯೇ ಹಕ್ಕುಗಳು ಬರುತ್ತವೆ. ನಾನು ಭರವಸೆ ಕೊಡುತ್ತೇನೆ. ಅನುಭವದಿಂದ ನಾನಿದನ್ನು ಬರೆಯುತ್ತಿದೇನೆ. ಯೌವನದಲ್ಲಿ ನಾನೂ ನನ್ನ ಹಕ್ಕುಗಳನ್ನು ಚಲಾಯಿಸುತ್ತ ಬದುಕನ್ನು ಮೊದಲಿಟ್ಟೆ. ಬಹುಬೇಗನೆ ನನಗೆ ಯಾವ ಅಧಿಕಾರವೂ ಇಲ್ಲ, ನನ್ನ ಹೆಂಡತಿಯ ಮೇಲೆ ಕೂಡ ಇಲ್ಲ ಎಂಬುದು ನನಗೆ ತಿಳಿಯಿತು. ಆಗ ನನ್ನ ಹೆಂಡತಿಯ ಬಗ್ಗೆ, ಮಕ್ಕಳು, ಗೆಳೆಯರು, ಜೊತೆಗಾರರು ಇವರ ಬಗ್ಗೆ, ಸಮಾಜದ ಬಗ್ಗೆ ನನ್ನ ಕರ್ತವ್ಯವೇನು ಎಂಬು ದನ್ನು ಅರಸಿದೆ; ಅದರಂತೆ ಮಾಡಿದೆ. ಈಗೇನಾಗಿದೆ ಗೊತ್ತೆ ? ಲೋಕದಲ್ಲಿ ಯಾರಿಗೂ ಇಲ್ಲದಷ್ಟು ಅಧಿಕಾರ, ಹಕ್ಕು ನನಗಿವೆ. ಇದು ಅತಿಶಯವಾಯಿ ತೆಂದರೆ, ನನಗಿಂತ ಹೆಚ್ಚು ಹಕ್ಕು ಪಡೆದವರನ್ನು ನಾನು ಕಂಡಿಲ್ಲ ಎನ್ನಬಲ್ಲೆ.

———

# ಮೌಲಾನಾಗೆ

ಬಾರಡೋಲಿ
೩೦—೧೨—೪೧

ಪ್ರಿಯ ಮೌಲಾನಾ ಸಾಹೇಬ,

ನಾನು ಬೊಂಬಾಯಿ ತೀರ್ಮಾನವನ್ನು ತಪ್ಪಾಗಿ ಅರ್ಥ ಮಾಡಿಕೊಂಡು ದೊಡ್ಡ ತಪ್ಪು ಮಾಡಿದೆನೆಂದು ವರ್ಕಿಂಗ್ ಕಮೀಟಿಯ ಚರ್ಚೆಯಿಂದ ನನಗನಿಸಿತು. ಈಗಿನದಾಗಲಿ ಯಾವ ಯುದ್ಧವೇ ಆಗಲಿ, ಮುಖ್ಯವಾಗಿ ಅಹಿಂಸೆಯ ಕಾರಣದಿಂದ ಕಾಂಗ್ರೆಸ್ಸು ಅದರಲ್ಲಿ ಪಾಲುಗೊಳ್ಳದೆಂಬ ಅರ್ಥವನ್ನು ನಾನು ಆ ತೀರ್ಮಾನಕ್ಕೆ ಮಾಡಿದ್ದೆ. ಆದರೆ ಅನೇಕ ಜನ ಸದಸ್ಯರು ಭಿನ್ನಾಭಿಪ್ರಾಯ ತೋರಿದರು; ಅಹಿಂಸೆಯ ಕಾರಣದಿಂದ ನಾವು ಯುದ್ಧ ವಿರೋಧಿಗಳಾಗ ಬೇಕಿಲ್ಲ ಎಂದರು. ನಾನು ಬೆರಗಾದೆ. ಬೊಂಬಾಯಿ ತೀರ್ಮಾನವನ್ನು ಮತ್ತೆ ಓದಿದೆ. ಮತ್ತೆ ಓದಿದಾಗ ಭಿನ್ನಾಭಿಪ್ರಾಯ ಹೇಳಿದವರ ಮಾತೇ ಸರಿ. ನಾನೇ ಆ ತೀರ್ಮಾನದಲ್ಲಿ ಇಲ್ಲದ ಅರ್ಥವನ್ನು ಮಾಡಿದ್ದೆ ಎನಿಸಿತು. ಈ ತಪ್ಪನ್ನು ತಿಳಿದುಕೊಂಡುದರಿಂದ, ಅಹಿಂಸೆಯ ಕಾರಣ ಅನಿವಾರ್ಯವಾಗಿಲ್ಲದ ಬೇರಾವ ಕಾರಣಗಳಿಗಾಗಿಯೂ ಯುದ್ಧ ಪ್ರಯತ್ನ ವಿರೋಧದಲ್ಲಿ ಕಾಂಗ್ರೆಸ್ಸಿಗೆ ನಾನು ದಾರಿ ತೋರಲಾರದವನಾಗಿದ್ದೇನೆ. ಬ್ರಿಟನ್ನಿಗೆ ದ್ವೇಷ ತೋರುವ ಉದ್ದೇಶದಿಂದ ಯುದ್ಧಕ್ಕೆ ವಿರೋಧ ಮಾಡಿದರೆ ನಾನದಕ್ಕೆ ಕೈಗೂಡಿಸಲಾರೆ. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದಿನದ ಭರವಸೆಕೊಟ್ಟರೆ ಬ್ರಿಟನ್ನಿನ ಯುದ್ಧಕ್ಕೆ ಸಾಮುಗ್ರಿಯ ಸಹಾಯ ಮಾಡುವ ಸಹಕಾರ ವೃತ್ತಿ ಆ ತೀರ್ಮಾನದಲ್ಲಿದೆ. ನನ್ನ ಅಭಿಪ್ರಾಯ ಹೀಗಿದ್ದರೆ, ಸ್ವಾತಂತ್ರ್ಯ ಸಂಪಾದನೆಗೆ ಹಿಂಸಾವಿಧಾನವೂ ಸರಿ ಎಂದು ತಿಳಿದು ಸ್ವಾತಂತ್ರ್ಯ ಸಂಪಾದನೆಗಾಗಿಯೇ ಯುದ್ಧಪ್ರಯತ್ನಕ್ಕೆ ಬಹಿಷ್ಕಾರ ಹಾಕಿದರೆ ನನ್ನ ನಡತೆ ದೇಶಾಭಿಮಾನ ಹೀನವೆಂದೇನು. ಹಿಂದುಸ್ಥಾನವನ್ನೂ ಲೋಕವನ್ನೂ ಅಹಿಂಸೆಯೇ ಕಾಯ್ದೀತೆಂದು ನನ್ನ ದೃಢ

ವಿಶ್ವಾಸ; ಇಲ್ಲವಾದರೆ ಆತ್ಮನಾಶ ಸಿದ್ಧ. ಹೀಗಿರುವಾಗ ನಾನು ಒಬ್ಬನೇ ಇರಲಿ, ನನ್ನ ಜೊತೆಗೆ ವ್ಯಕ್ತಿಗಳು ಸಂಸ್ಥೆಗಳು ಇರಲಿ, ನನ್ನ ಧರ್ಮವನ್ನು ನಾನು ನಿರ್ವಹಿಸಲೇ ಬೇಕು. ಆದ್ದರಿಂದ ಬೊಂಬಾಯಿ ತೀರ್ಮಾನವನ್ನು ನನ್ನ ತಲೆಯ ಮೇಲೆ ಹೊರಿಸಿದ ಹೊಣೆಯನ್ನು ದಯವಿಟ್ಟು ಇಳಿಸಿಬಿಡಿ. ನನ್ನ ಅಭಿಪ್ರಾಯದಂತೆ ಅಹಿಂಸೆಯನ್ನು ನಂಬಿ ನನ್ನ ನಿಯಮಗಳಿಗೆ ಒಪ್ಪಿ ನಡೆಯಬಲ್ಲವರಲ್ಲಿ ನಾನು ಆರಿಸಿಕೊಂಡ ಕಾಂಗ್ರೆಸ್ಸಿಗರೊಡನೆ ಯುದ್ಧ ವಿರುದ್ಧವಾಗಿ ಭಾಷಣ ಸ್ವಾತಂತ್ರ್ಯದ ಸತ್ಯಾಗ್ರಹವನ್ನು ನಾನು ಮುಂಬರಿಸ ಬೇಕಾದೀತು.

ಇಂಥ ಸಂದರ್ಭದಲ್ಲಿ ಜನರನ್ನು ದೃಢವಾಗಿ ನಡೆಸಲು ಆಯಾ ಸ್ಥಳದಲ್ಲಿ ಅಗತ್ಯವಾದ ಜನರನ್ನು ಸತ್ಯಾಗ್ರಹಕ್ಕಾಗಿ ಆರಿಸುವುದಿಲ್ಲ.

ನಿಮ್ಮ ವಿಶ್ವಾಸಿಕ

ಮೋ. ಕ. ಗಾಂಧಿ

---